# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ನಮಗೆ ಯಾರ ಮೇಲೆ ಹೆಚ್ಚು ಪ್ರೀತಿಯೋ, ಅವರ ಮೇಲೆ ಕೆಟ್ಟ ಸಿಟ್ಟು ಬರುವುದುಂಟು. ಆಗ ನಾಲಗೆಗೆ ಕೆಲವು ಬೈಗಳ ಮಾತು ಅಭ್ಯಾಸವಾಗಿದ್ದುದು ತಿಳಿಯದಂತೆಯೇ ಬಂದುಬಿಡುತ್ತದೆ. ನಿಜಕ್ಕೂ ಹಾಗಾಗುವುದು ಇಷ್ಟವಲ್ಲ. ಆದರೆ ಕೆಲವು ಬೈಗಳು ಹೊಟ್ಟೆಯುರಿದು ಹೊರಡುವುದುಂಟು. ಅಂತಹದು ಋಷಿಗಳ ಶಾಪವಾಕ್ಯಕ್ಕೆ ಸಮಾನವಾಗಿ ಬಿಡುತ್ತದೆ. ಇದನ್ನು ಎತ್ತಿ ತೋರಿಸುವ ಈ ಸಂಚಿಕೆಯಲ್ಲಿರುವ "ಬೈಗಳ ಮಾತು" ಎಂಬ ಹಳೆಯ ಕಥೆ ಅಜರಾಮರ ವೆಂಬಂತಹದು.

## ಅಮರವಾಣಿ

ನೀಚಾಶ್ರಯೋ ನ ಕರ್ತವ್ಯಃ ಕರ್ತವ್ಯೋ ಮಹದಾಶ್ರಯಃ
ಈಶಾಶ್ರಯೋ ಮಹಾನಾಗಃ ಪಪ್ರಚ್ಛ ಗರುಡಂ ಸುಖಮ್.

ಅಲ್ಪರನ್ನು ಆಶ್ರಯಿಸುವುದಕ್ಕಿಂತ ಮಹನೀಯರನ್ನು ಆಶ್ರಯಿಸುವುದು ಮೇಲು. ಶಿವನನ್ನು ಆಶ್ರಯಿಸಿದ ಸರ್ಪವು ಗರುಡನ ಕುಶಲ ವಿಚಾರಿಸುವಷ್ಟು ಮಹತ್ವ ಪಡೆಯಿತು.

ಸಂಪುಟ : ೭೮ ಜೂನ್ '೮೨ ಸಂಚಿಕೆ : ೬

ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦





# ವಂಚಕಬುದ್ಧಿ

ಒಂದು ಊರಿನಲ್ಲಿ ವಿಶಾಖನೆಂಬ ದೊಡ್ಡ ವರ್ತಕನೊಬ್ಬನಿದ್ದನು. ಆತನ ಬಳಿಯಲ್ಲಿ ಚಲಪತಿ ಎಂಬ ಹದಿನಾರು ವಯಸ್ಸಿನ ಹುಡುಗನು ಕೆಲಸ ಮಾಡಿಕೊಂಡಿದ್ದನು. ಅವನು ಕೆಲಸಕ್ಕೆ ಸೇರಿದ ಕೆಲವು ದಿನಗಳಲ್ಲೇ ಯಜಮಾನನಿಂದ ವಿಶ್ವಾಸಪಾತ್ರನಾದ ಕೆಲಸಗಾರನೆಂದು ಅನಿಸಿಕೊಂಡು ಮನ್ನಣೆಗೊಂಡನು. ಆಮೇಲೆ ಹಣದ ವಿಷಯದ ಕೆಲಸಗಳು ಚಲಪತಿಯ ಪಾಲಿಗೆ ಬರತೊಡಗಿದುವು.

ವಿಶಾಖನಿಗೆ ವ್ಯಾಪಾರಕ್ಕೆ ಸಂಬಂಧಿಸಿ, ಇತರ ವರ್ತಕ ಗಿರಾಕಿಗಳಿಂದ ಬಾಕಿ ವಸೂಲು ಮಾಡುವ ಕೆಲಸಗಳಿದ್ದುವು. ಅಂತಹುದಕ್ಕೆ ನಂಬಿಕೆಯವರನ್ನೇ ಕಳುಹಿಸುವನು. ಈಗ ಚಲಪತಿಯನ್ನು ಕಳುಹಿಸ ತೊಡಗಿದನು. ಅವನೂ ಅದನ್ನು ಸರಿಯಾಗಿ ನಿರ್ವಹಿಸುವನು.

ಆ ಊರಿಗೆ ಹತ್ತು ಮೈಲು ದೂರದಲ್ಲಿರುವ ಇನ್ನೊಂದು ಊರಿನಲ್ಲಿ ಗೋಪಾಲಯ್ಯನೆಂಬ ಇನ್ನೊಬ್ಬ ದೊಡ್ಡ ವ್ಯಾಪಾರಿ ಇದ್ದನು. ಆತನಿಂದ ವಿಶಾಖನಿಗೆ ಐದು ಸಾವಿರ ರೂಪಾಯಿ ಬರುವಂತಹುದಿತ್ತು. ಆ ಹಣವನ್ನು ಕೇಳಿ ತೆಗೆದುಕೊಂಡು ಬರುವ ಕೆಲಸವನ್ನು ವಿಶಾಖನು ಚಲಪತಿಗೆ ಒಪ್ಪಿಸಿದನು. ಬೆಳಿಗ್ಗೆ ಹೊರಟರೆ ಮಧ್ಯಾಹ್ನಕ್ಕೆ ಅಲ್ಲಿಗೆ ಮುಟ್ಟಿ ಸ್ವಲ್ಪ ವಿಶ್ರಾಂತಿ ಪಡೆದು ಹೊರಟರೆ, ಸಾಯಂಕಾಲದಲ್ಲಿ ಹಿಂದಿರುಗಿ ಬರಬಹುದಾಗಿತ್ತು.

ಚಲಪತಿ ಬೆಳಿಗ್ಗೆ ಹೊರಟು ಮಧ್ಯಾಹ್ನದೊಳಗೆ ಆ ಊರಿಗೆ ಹೋಗಿ ಸೇರಿದನು. ವಿಶಾಖನ ವಿಶ್ವಾಸದ ಕೆಲಸಗಾರನೇ ಬಂದುದರಿಂದ ಗೋಪಾಲಯ್ಯ ಅವನನ್ನು ನಂಬಿ ಸಾವಿರಾರು ರೂಪಾಯಿಗಳನ್ನು ಎಣಿಸಿ ಮೂಟೆ ಕಟ್ಟಿ ಅವನ ಕೈಯಲ್ಲಿ ಕೊಟ್ಟು "ಭದ್ರವಾಗಿ ತೆಗೆದುಕೊಂಡು ಹೋಗಪ್ಪ" ಎಂದನು. ಚಲಪತಿ ಆ ಹಣವನ್ನು ಕಟ್ಟಿಕೊಂಡು ಮಧ್ಯಾಹ್ನದ ಮೇಲೆ ಅಲ್ಲಿಂದ ಹೊರಟನು.

ಆ ಎರಡು ಊರುಗಳ ನಡುವೆ ದೊಡ್ಡದೊಂದು ಅಗಲವಾದ ನದಿಯಿದ್ದಿತು. ಮಳೆಗಾಲದ ಹೊರತು ನದಿಯಲ್ಲಿ ನೀರಿರಲಾರದು. ಕೇವಲ ಮರಳು ರಾಶಿಯ ಆ ನದಿಯ ಮಧ್ಯದಲ್ಲಿ ಮಾತ್ರ ಅರೆ ಮೊಣಕಾಲಿನಷ್ಟು ನೀರು ಇರುತ್ತಿತ್ತು. ಆದರೆ ಆ ನದಿಯನ್ನು ನಂಬಲು ಸಾಧ್ಯವಿಲ್ಲ. ಒಂದೊಂದು ಸಾರಿ ದೂರದಲ್ಲಿದ್ದ ಗುಡ್ಡಗಾಡು ಪ್ರದೇಶದಲ್ಲಿ ಮಳೆ

ಬಿ. ಎ. ರಾವ್

ಬಂದುಬಿಟ್ಟರೆ ತೀರಿತು. ಉಬ್ಬರದ ಮಳೆ ನೀರು ಒಮ್ಮೆಗೇ ದೊಡ್ಡ ಪ್ರವಾಹವಾಗಿ ನದಿ ಪೂರಾ ಆಕ್ರಮಿಸಿಕೊಂಡು ಒಯ್ಲಿನೊಡಗೂಡಿ ಬಂದು ಬಿಡುತ್ತದೆ.

ಅಂತಹ ನದಿಯನ್ನು ದಾಟುತ್ತಿದ್ದ ಚಲಪತಿಗೆ ಗುಡ್ಡಗಳ ಕಡೆಯಿಂದ ದೊಡ್ಡ ಭೋರ್ಗರೆತ ಕೇಳ ತೊಡಗಿತು. ಅವನು ಆಶ್ಚರ್ಯಪಡುತ್ತ ಆ ಕಡೆಗೆ ನೋಡುವಷ್ಟರಲ್ಲಿ, ಆಳೆತ್ತರದ ನೆರೆ ನೀರು ನೊರೆ ಯುಗುಳುತ್ತ ನದಿಯಲ್ಲಿ ಪ್ರವಹಿಸಿಕೊಂಡು ಬಂದೇ ಬಂದಿತು. ಚಲಪತಿ ಓಟದ ನಡಿಗೆಯಿಂದ, ಬೇಗ ಬೇಗನೆ ಹೋಗಿ ತೀರವನ್ನು ಸೇರಿ ದೂರ ಓಡಿ ನಿಂತನು.

ಕ್ಷಣಮಾತ್ರದಲ್ಲಿ ಆ ಪ್ರದೇಶವೆಲ್ಲಾ ಜಲಮಯ ವಾಗಿ ಹೋಯಿತು. ಪ್ರವಾಹದಲ್ಲಿ ಮುರಿದುಬಿದ್ದ ಮರದ ಕೊಂಬೆಗಳೂ ಸೊಪ್ಪು, ಸೊದೆಗಳೂ ಹೊಡೆದುಕೊಂಡು ಬರುತ್ತಿದ್ದುವು. ಸ್ವಲ್ಪ ದೂರದಲ್ಲಿ ಇಬ್ಬರು ಮನುಷ್ಯರು ಪ್ರವಾಹದಲ್ಲಿ ಮುಳುಗೇಳುತ್ತ ಒಯ್ಲಿನಲ್ಲಿ ಒಯ್ಯಲ್ಪಡುವುದನ್ನು ನೋಡಿ ಅವನ ಹೃದಯಕ್ಕೆ ಮುಳ್ಳು ಚುಚ್ಚಿದ ಹಾಗೆನಿಸಿತು. ಆದರೆ ತಾನು ಏನೂ ಮಾಡಲು ಸಾಧ್ಯವಿಲ್ಲದೆ ಅವರ ದುರ್ಗತಿಯನ್ನು ನೆನೆದು ಪರಿತಪಿಸುತ್ತಾ ಊರಿನ ಕಡೆಗೆ ನಡೆಯ ತೊಡಗಿದನು.

ಊರನ್ನು ಸಮೀಪಿಸುವಾಗ ಅವನ ಮನಸ್ಸಿನಲ್ಲಿ ಒಂದು ದುರಾಲೋಚನೆ ಎದ್ದುಕೊಂಡಿತು. ತನ್ನ ಹತ್ತಿರ ದೊಡ್ಡ ಧನದ ಗಂಟಿದೆ. ಒಂದು ಚಿಕ್ಕ ಸುಳ್ಳಿನಿಂದ ಅದಷ್ಟೂ ತನ್ನದಾಗುತ್ತದೆ. ಸಂದರ್ಭ ಬಂದಾಗ ಉಪಯೋಗಿಸಿಕೊಳ್ಳದಿದ್ದರೆ ತಾನೊಬ್ಬ ಹೆಡ್ಡನೇ ಸರಿ !

ಚಲಪತಿ ಚುರುಕಾಗಿ ಆ ಹಣದ ಗಂಟನ್ನು ತನ್ನ ಮನೆಯಲ್ಲಿ ಅಡಗಿಸಿಟ್ಟು, ಒಂದು ಕೆರೆಯಲ್ಲಿ ಹೊರಳಾಡಿ ಅಳುಮೋರೆಯಿಂದ ವಿಶಾಖನ ಬಳಿಗೆ ಹೋಗಿ ನಿಂತನು. ಅವನ ಅವತಾರವನ್ನು ನೋಡಿ



ವಿಶಾಖನು ಗಾಬರಿಯಾಗಿ "ಏನಾಯಿತಪ್ಪಾ ?" ಎಂದು ಕೇಳಿದನು.

"ಅಯ್ಯಾ, ನಾನು ದಾರಿಯಲ್ಲಿರುವ ಆ ನದಿ ಯನ್ನು ದಾಟುವಾಗ, ಥಕ್ಕನೆ ಆಳೆತ್ತರದ ನೆರೆಬಂದು ನನ್ನನ್ನು ಮಗುಚಿ ಹಾಕಿಬಿಟ್ಟಿತು. ಬಹಳ ದೂರ ಹೊಡೆದುಕೊಂಡು ಹೋಗಿ ಹೇಗೋ ದಡ ಸೇರಿ ಬಂದೆನಯ್ಯಾ" ಎಂದನು.

"ದೊಡ್ಡ ಗಂಡದಿಂದ ಪ್ರಾಣ ಉಳಿಸಿಕೊಂಡು ಬಂದೆಯಪ್ಪಾ. ಅದೃಷ್ಟವಂತ ! ಹೋಗಿ ವಿಶ್ರಾಂತಿ ಯನ್ನು ತೆಗೆದುಕೋ" ಎಂದನು ವಿಶಾಖ.

"ಆದರೆ ಅಯ್ಯಾ..." ಎಂದು ಚಲಪತಿ ಬಿಕ್ಕ ತೊಡಗಿದ. "ದೊಡ್ಡ ನಷ್ಟ ಬಂದುಬಿಟ್ಟಿತು ಸ್ವಾಮೀ. ನೆರೆಯಲ್ಲಿ ಬಿದ್ದು ಹೊಡೆದುಕೊಳ್ಳುತ್ತ ಈಜುವಾಗ ಕಂಕುಳಲ್ಲಿ ಕಟ್ಟಿಕೊಂಡಿದ್ದ ಐದು ಸಾವಿರದ ಗಂಟು ಎಲ್ಲಿ ಬಿತ್ತೋ ಗೊತ್ತಾಗಲಿಲ್ಲ. ಹೋಯಿತು ಸ್ವಾಮೀ. ಹೋಯಿತು!" ಎಂದನು.



PLEASE HANDLE
WITH CARE



ವಿಶಾಖನು ಬೆರಗಾದನು. ಐದು ಸಾವಿರವೆಂಬುದು ದೊಡ್ಡ ಮೊತ್ತವೇ. ಆದರೂ ಪ್ರಾಣಕ್ಕೇ ಬಂದ ಸಮಯದಲ್ಲಿ ಹಣದ ಸಂಗತಿ ಯಾರಿಗೂ ನೆನಪಿಗೆ ಬರಲಾರದು.

"ಸರಿ, ಆದುದಾಯಿತು. ಇನ್ನೇನು ಮಾಡಲು ಸಾಧ್ಯ ? ಮೊದಲು ಮನೆಗೆ ಹೋಗಿ ಮೈ ಕೈ ಒರೆಸಿ ಒಣ ಬಟ್ಟೆ ಕಟ್ಟಿಕೋ. ಚಿಂತಿಸಬೇಡ" ಎಂದನು ವಿಶಾಖ. ಚಲಪತಿ ಮೆಲ್ಲನೆ ಹೊರಟುಹೋದನು.

ಮುಂದೆ ನಾಲ್ಕು ದಿನಗಳ ಮೇಲೆ ಅವನಿಗೆ ಬಾಕಿಯಾದ ಹಣ ಕೊಟ್ಟು ಕಳುಹಿಸಿದ ಗೋಪಾಲಯ್ಯ ವಿಶಾಖನ ಅಂಗಡಿಗೆ ಬಂದು "ಈ ಊರಲ್ಲಿ ಸ್ವಲ್ಪ ಕೆಲಸವಿತ್ತು, ಬಂದೆ. ಮೊನ್ನೆ ನಾನು ಕಳುಹಿಸಿದ ಹಣ ಬಂದಿತಷ್ಟೆ? " ಎಂದು ಕೇಳಿದನು.

ಆ ಸಮಯದಲ್ಲಿ ಚಲಪತಿ ಅಂಗಡಿಯಲ್ಲಿ ಇರಲಿಲ್ಲ. ವಿಶಾಖನು ಗೋಪಾಲಯ್ಯನಿಗೆ, ಚಲಪತಿ ಹೇಳಿದ ಸಮಾಚಾರವನ್ನು ಹೇಳಿ, "ಗೋಪಾಲಯ್ಯಾ, ಒಂದು ಕ್ಷಣ ಮಾತ್ರ ಅವನ ಮಾತಿನಲ್ಲಿ ಮೋಸವಿದೆಯೇನೋ ಎಂಬ ಅನುಮಾನ ಬಾರದಿರಲಿಲ್ಲ. ನದಿಯಲ್ಲಿ ಥಕ್ಕನೆ ದೊಡ್ಡ ನೆರೆಬಂದ ಸಂಗತಿ ನಿಜವೇ ಎಂದು ಬೇರೆಯವರು ಕೂಡಾ ಹೇಳಿದರು. ಮುಖ್ಯ ನನಗೆ ನಷ್ಟವಾಗುವ ಕಾಲ !" ಎಂದನು.

ಗೋಪಾಲಯ್ಯ ಬೆರಗಾಗಿ ಏನೋ ಯೋಚಿಸತೊಡಗಿದನು. ಆ ದಿನ ಚಲಪತಿಯ ಕೈಗೆ ಐದು ಸಾವಿರವನ್ನು ಕೊಟ್ಟು ಕಳುಹಿಸಿದ ಮೇಲೆ, ನದಿಯಾಚೆಗಿನ ಗಣಪವರಕ್ಕೆ ಹೋಗುವ ಕೆಲಸ ನೆನಪಾಗಿ, ಚಲಪತಿ ಹೊರಟ ಸ್ವಲ್ಪ ಹೊತ್ತಿಗೆಲ್ಲಾ ಗೋಪಾಲಯ್ಯನೂ ಅವನ ಹಿಂದೆಯೇ ಹೊರಟಿದ್ದನು. ಅರ್ಧ ಫರ್ಲಾಂಗು ಮುಂದೆ ಚಲಪತಿ ಹೋಗುವುದನ್ನೂ ನೋಡಿದ್ದನು. ಆದರೆ ಗೋಪಾಲಯ್ಯ ನದಿಯನ್ನು ದಾಟಬೇಕೆನ್ನುವುದರೊಳಗೆ ನದಿಗೆ ನೆರೆಬಂದು ಬಿಟ್ಟಿತ್ತು. ಅದಕ್ಕೆ ಮೊದಲೇ ಚಲಪತಿ ನದಿಯನ್ನು ದಾಟಿ ಆಚೆಯ ದಡದಲ್ಲಿ ನಿಂತಿದ್ದನು. ಅದನ್ನು ನೋಡಿ ಗೋಪಾಲಯ್ಯನಿಗೆ ಸಂತೋಷವೂ ಆಗಿತ್ತು.

ಹೀಗೆ ನಡೆದಿರುವಾಗ ಚಲಪತಿ ತನ್ನ ಯಜಮಾನನಿಗೆ ಏನೋ ಒಂದು ಕಟ್ಟುಕಥೆ ಹೇಳಿ ಐದು ಸಾವಿರನ್ನು ಕದ್ದುಕೊಂಡಿದ್ದಾನೆಂದು ಗೋಪಾಲಯ್ಯನಿಗೆ ಸ್ಪಷ್ಟವಾಯಿತು. ಚಲಪತಿ ಎಂಬ ಆ ನೌಕರನು ತುಂಬ ಪ್ರಾಮಾಣಿಕನೆಂದು ನಂಬಿರುವ ವಿಶಾಖನನ್ನು ಮಾತಿನಿಂದಲ್ಲದೆ, ಕೃತಿಯಿಂದಲೇ ಅವನು ಎಂಥವನೆಂಬುದನ್ನು ತೋರಿಸಬೇಕೆಂದು ಗೋಪಾಲಯ್ಯನು ನಿಶ್ಚಯಿಸಿ, "ಅಯ್ಯಾ, ವಿಶಾಖರೇ, ನಿಮ್ಮದು ದೊಡ್ಡ ಗುಣವಾದುದರಿಂದ ಸರಿ ಹೋಯಿತು. ಅದೇ ಇನ್ನೊಬ್ಬರಾಗಿರುತ್ತಿದ್ದರೆ, ನಾನೇ ನಿಮ್ಮ ಚಲಪತಿಯ ಕೈಗೆ ನೂರೋ ಇನ್ನೂರೋ ಕೊಟ್ಟು, ಹಣವೆಲ್ಲಾ ನೆರೆಯಲ್ಲಿ ಹೋಯಿತೆಂದು ಹೇಳಿಸಿರಬೇಕು ಎಂದು ಅನುಮಾನ ಪಡುತ್ತಿದ್ದರು." ಎಂದನು.

The Indian Institute of



ಆ ಮಾತಿಗೆ ವಿಶಾಖನು ನಕ್ಕು, "ನನ್ನ ನೌಕರನ ಮೇಲೆ ನನಗೆಷ್ಟು ವಿಶ್ವಾಸವಿದೆಯೋ, ಜತೆ ವರ್ತಕರಾದ ನಿಮ್ಮ ಮೇಲೆಯೂ ಅಷ್ಟೇ ವಿಶ್ವಾಸ ನನಗಿದೆ." ಎಂದನು.

"ಹಾಗೇನು! ಹಾಗಾದರೆ ನೀವು ಒಂದು ಕೆಲಸ ಮಾಡಲೇಬೇಕು. ನಾನು ನಿಮ್ಮ ಚಲಪತಿಗಿಂತಲೂ ಎಷ್ಟರ ಮಟ್ಟಿಗೆ ನಂಬಸ್ಥನೆಂಬುದನ್ನು ರುಜುಪಡಿಸಿ ನಿರೂಪಿಸಬೇಕೆಂದಿದ್ದೇನೆ. ಈ ದಿನ ರಾತ್ರಿ ಒಂಬತ್ತು ಗಂಟೆಯ ಸುಮಾರಿಗೆ, ನೀವು ಸ್ವಲ್ಪ ವೇಷ ಬದಲಾಯಿಸಿಕೊಂಡು ಶಿವಾಲಯದ ಹತ್ತಿರವಿರುವ ದೊಡ್ಡ ಬೇವಿನ ಮರದ ಬುಡಕ್ಕೆ ಬಂದು ಕತ್ತಲೆಯಲ್ಲಿ ನಿಂತಿರಬೇಕು. ನಾನು ಅದರಾಚೆಗಿರುವ ಪೊದರುಗಳ ಹಿಂದೆ ಅಡಗಿರುತ್ತೇನೆ. ಆಗ ಏನು ನಡೆಯುವುದೆಂದು ನಿಮಗೆ ಗೊತ್ತಾಗುತ್ತದೆ" ಎಂದನು ಗೋಪಾಲಯ್ಯ.

ವಿಶಾಖನು ಆಶ್ಚರ್ಯ ಪಡುತ್ತ "ಏನಿದೆಲ್ಲಾ ಮಾಯಾ ಮುಸುಕು? ಹೇಳುವಂಥಾದ್ದನ್ನು ಸ್ಪಷ್ಟವಾಗಿ ಹೇಳಬಾರದೇನಯ್ಯಾ? ಅದೇನು ವಿಶೇಷವೋ ಹೇಳಿಬಿಡಿ." ಎಂದನು.

"ಹಾಗೆ ಹೇಳಿದರೆ ಅರ್ಥವಾಗಲಾರದೆಂದೇ ಶಿವಾಲಯದ ಹತ್ತಿರ ಬರಲು ಹೇಳುವುದು. ನನ್ನನ್ನು ನಂಬಿರಿ [illegible]! ತಪ್ಪದೆ ಬರಬೇಕು, ಮರೆಯಬೇಡಿ ಮತ್ತೆ!" ಎಂದು ಹೇಳಿ ಗೋಪಾಲಯ್ಯ ಹೊರಟು ಹೋದನು.

ಅದೇ ದಿನ ಸಾಯಂಕಾಲ ಗೋಪಾಲಯ್ಯನು ಚಲಪತಿಯ ಮನೆಗೆ ಹೋಗಿ ಹೊರಗೆ ನಿಂತು ಅವನನ್ನು ಕೂಗಿ ಕರೆದನು. ಚಲಪತಿ ಬಾಗಿಲು ತೆರೆದು ಅಲ್ಲಿ ನಿಂತ ಗೋಪಾಲಯ್ಯನನ್ನು ನೋಡಿ ಬೆಚ್ಚಿ ಬಿದ್ದನು.

ಆದರೆ ಗೋಪಾಲಯ್ಯ ಮೃದುವಾಗಿ, "ಪಾಪ! ಮೊನ್ನೆ ನಾನು ಕೊಟ್ಟ ಹಣವಷ್ಟೂ ನೆರೆಯಲ್ಲಿ ಕಳೆದು ಹೋಯಿತಲ್ಲಯ್ಯಾ? ನಿನ್ನ ಜೀವ ಉಳಿದು ಬದುಕಿದ್ದೇ ದೊಡ್ಡದು!" ಎಂದನು.

ಅದನ್ನು ಕೇಳಿ ಚಲಪತಿಯ [illegible] ಭಯವು ಮಾಯವಾಯಿತು. ಅವನು [illegible] ನಟಿಸಿ, "ಹೌದು ಸ್ವಾಮೀ! ಯಜಮಾನರ ಹಣ ಐದು ಸಾವಿರವೂ ಹೋದ್ದು ಗೊತ್ತೇ ಆಗಲಿಲ್ಲ, ಸ್ವಲ್ಪ ಈಜುಬಲ್ಲವನಾದ್ದರಿಂದ ಹೇಗೋ ದಡಕ್ಕೆ ಬಿದ್ದೆ" ಎಂದನು.

ಗೋಪಾಲಯ್ಯ ಗೇಲಿಯಾಗಿ ನಗುತ್ತಾ, "ಸಾಕು ಬಿಡು! ಈ ಕಳ್ಳ ನಟನೆ ನನ್ನ ಹತ್ತಿರ ನಡೆಯಲಾರದು. ನಿನ್ನ ಬುದ್ಧಿ ಹೇಗೆ ಅಂತ ತಿಳಿಯಲಿಕ್ಕೇ ಹಾಗೆ ಹೇಳಿದೆ. ನದಿಯಲ್ಲಿ ನೆರೆ ನೀರು ಬರುವ ಮೊದಲೇ ನೀನು ದಾಟಿಬಿಟ್ಟಿದ್ದನ್ನು ನಾನೇ ನೋಡಿದ್ದೇನೆ. ಬೇಕಾದರೆ ಇನ್ನಿಬ್ಬರೂ ಸಾಕ್ಷಿಗಳಿದ್ದಾರೆ!" ಎಂದನು.

ಈಗ ಚಲಪತಿ ಗದಗದ ನಡುಗಿದನು. ಆಗ ಗೋಪಾಲಯ್ಯ ಅವನ ಹೆಗಲ ಹಿಂದೆ ತಟ್ಟಿ, "ಈ

ಸಂಗತಿ ನಿನ್ನ ಯಜಮಾನರ ಹತ್ತಿರ ಹೇಳಲಿಲ್ಲ, ಹೆದರಬೇಡ. ಆ ಐದು ಸಾವಿರದಲ್ಲಿ ಅರ್ಧ ಭಾಗ ನನಗೆ ಕೊಡಬೇಕು. ಅಷ್ಟೇ, ಇಷ್ಟತಾನೇ ?" ಎಂದನು.

ಚಲಪತಿಗೆ ಧೈರ್ಯ ಬಂದಿತು. ಆಗಲೆಂದು ತಲೆಯಾಡಿಸಿ ಹಣ ತರಲು ಒಳಗೆ ಹೋಗಲು ತಿರುಗಿದನು. ಗೋಪಾಲಯ್ಯ ಅವನನ್ನು ತಡೆದು ನಿಲ್ಲಿಸಿ, "ತಡೆ; ಈಗ ನಾನು ಒಬ್ಬ ಸ್ನೇಹಿತರನ್ನು ನೋಡಲು ಹೋಗುತ್ತೇನೆ. ಕೈಯಲ್ಲಿ ಹಣದ ಗಂಟು ಇಟ್ಟುಕೊಳ್ಳುವುದು ಒಳ್ಳೆಯದಲ್ಲ. ನೀನು ಒಂಬತ್ತು ಗಂಟೆ ಹೊತ್ತಿಗೆ ಶಿವಾಲಯದ ಹತ್ತಿರವಿರುವ ಬೇವಿನ ಮರದ ಕಡೆಗೆ ಬಾ. ಅಲ್ಲೇ ನಾನು ನಿಂತಿರುತ್ತೇನೆ." ಎಂದನು.

ಆದರಂತೆಯೇ ಚಲಪತಿ ರಾತ್ರಿ ಒಂಬತ್ತು ಗಂಟೆಯ ಸಮಯಕ್ಕೆ ಎರಡುವರೆ ಸಾವಿರದ ಗಂಟನ್ನು ತೆಗೆದುಕೊಂಡು ಶಿವಾಲಯದ ಕಡೆಗೆ ಹೋದನು. ಅಲ್ಲಿಯ ಬೇವಿನ ಮರದ ಕತ್ತಲೆಯಲ್ಲಿ ಗೋಪಾಲಯ್ಯ ಹೇಳಿದಂತೆಯೇ ಒಬ್ಬ ಮನುಷ್ಯನು ನಿಂತುಕೊಂಡಿರುವುದು ಕಂಡಿತು. ಚಲಪತಿ ಅವನ ಬಳಿಗೆ ಹೋಗಿ ಗಂಟನ್ನು ಮುಂದೆ ಮಾಡಿ, "ತಕ್ಕೊಳ್ಳಿ ಗೋಪಾಲಯ್ಯನವರೇ. ನಾನು ಹೇಳಿದ ಹಾಗೆಯೇ ಎರಡೂವರೆ ಸಾವಿರ ತಂದಿದ್ದೇನೆ. ದಯಮಾಡಿ ನೀವು ಕೂಡಾ ಈ ಸಂಗತಿ ನನ್ನ ಯಜಮಾನರಿಗೆ ಹೇಳಬೇಡಿ ಸ್ವಾಮಿ!" ಎಂದನು.

ಆ ಮಾತನ್ನು ಕೇಳಿ ಕತ್ತಲೆಯಲ್ಲಿ ನಿಂತಿದ್ದ ವಿಶಾಖನಿಗೆ ತಲೆ ತಿರುಗಿಹೋಯಿತು ! ಬರುವ ಕೋಪವನ್ನು ಸಹಿಸಲಾರದೆ, ಚಲಪತಿಯ ಕೆನ್ನೆಯ ಮೇಲೆ ಬಿಸಿಯಾದೊಂದು ತಪರಾಕಿ ಏರಿಸಿ, "ದ್ರೋಹಿ ! ನೀನು ಹೀಗೆ ಮಾಡುವಿ ಅಂತ ಯೋಚಿಸಲೇ ಇಲ್ಲ ! ನಿನ್ನೀಗಲೇ ಕೊತ್ವಾಲನಿಗೆ ಒಪ್ಪಿಸುತ್ತಿದ್ದೆ. ಇಷ್ಟು ಕಾಲದಿಂದ ವಿಶ್ವಾಸದಿಂದಿದ್ದೀ ಅಂತಲೇ ಕ್ಷಮಿಸುತ್ತೇನೆ. ಇನ್ನು ಮೇಲೆ ಕಸಮುಸುರೇ ಆಳಿನ ಹಾಗೆ ಅಂಗಡಿ ಕಸಗುಡಿಸು, ಮೂಟೆ ಹೊತ್ತುಕೊಂಡು ಕೂಲಿಯಾಳಾಗಿರು. ಒಂದು ವರ್ಷದ ವರೆಗೆ ನೋಡುತ್ತೇನೆ ಬುದ್ಧಿ ಬರುತ್ತದೋ ಅಂತ." ಎಂದನು.

ಆಗ ದೂರದಲ್ಲಿದ್ದ ಗೋಪಾಲಯ್ಯ ಅಲ್ಲಿಗೆ ಬಂದು, ಕೆಳಗೆ ಬಿದ್ದಿದ್ದ ಹಣದ ಗಂಟನ್ನು ಎತ್ತಿ, ವಿಶಾಖನಿಗೆ ಕೊಡುತ್ತ, ಚಲಪತಿಯೊಂದಿಗೆ, "ಆ ಉಳಿದ ಎರಡೂವರೆಸಾವಿರ ಕೂಡಾ ಯಜಮಾನರಿಗೆ ಕೊಟ್ಟು ಬಿಡು, ನಿನಗೆ ಇಷ್ಟು ಕಡಿಮೆ ಶಿಕ್ಷೆಕೊಡುವರೆಂದು ನಾನು ಅಂದುಕೊಂಡಿಲ್ಲ. ನಿನ್ನ ಯಜಮಾನನ ದಾತೃತ್ವಕ್ಕೆ ಮೆಚ್ಚುತ್ತೇನೆ. ಇನ್ನಾದರೂ ಒಳ್ಳೇ ಹೆಸ[illegible]" ಎಂದನು.



The Indian Institute of World Culture




೭

[ರಾಜನು ಸಿಂಹಾಸನ ತ್ಯಜಿಸಬೇಕೆಂದು ಪ್ರಜೆಗಳು ಮಾಡಿದ ಆಂದೋಳನೆಯಿಂದ ಚಿತ್ರಸೇನರಾಜನು ನಿರಾಶೆಯಿಂದ ಪಶ್ಚಾತ್ತಾಪ ಪಟ್ಟು ಮಂಟಪದ ತುದಿಯಿಂದ ಕೆಳಗೆ ಧುಮುಕಿ ಪ್ರಾಣತ್ಯಾಗ ಮಾಡಿದನು. ಪ್ರಜೆಗಳು ಸಮರಸೇನನಿಗೆ ಜಯಜಯಕಾರ ಮಾಡಿದರು. ಸಮರಸೇನನು ನರವಾಹನನನ್ನು ಜತೆಗಿಟ್ಟುಕೊಂಡು ಶತ್ರುಗಳ ಮೇಲೆ ದಾಳಿ ತೆಗೆಯಲು ಹೊರಟನು],

ನಡೆದ ಸಂಗತಿಗಳನ್ನು ವಿಸ್ತಾರವಾಗಿ ಮಂದರ ದೇವನಿಗೆ ಹೇಳುತ್ತಾ ಶಿವದತ್ತನು ಮುಂದುವರಿಸಿ ಹೇಳ ತೊಡಗಿದನು : “ಯುದ್ಧ ವ್ಯೂಹದಲ್ಲಿ ಚೆನ್ನಾಗಿ ನುರಿತ ಸಮರಸೇನನು ಮುನ್ನೂರು ಮಂದಿ ವೀರ ಕಾಲಾಳುಗಳನ್ನು ಮುಂದೆ ಮಾಡಿ, ಅವರ ಮುಂದಿನಿಂದ ಅರ್ಧ ಚಂದ್ರಾಕಾರವಾಗಿ ಅಶ್ವ ಸೈನಿಕರು ಸಾಗುವಂತೆ ವ್ಯೂಹ ರಚನೆಯನ್ನು ಕ್ಷಣ ಮಾತ್ರದಲ್ಲಿ ಮಾಡಿಟ್ಟುದನ್ನು ನೋಡಿ ನಾನು ಆಶ್ಚರ್ಯದಿಂದ ಮೂಗಿನ ಮೇಲೆ ಬೆರಳಿಟ್ಟೆ. ಶತ್ರುಗಳ ಅಶ್ವಿಕರು ಥಕ್ಕನೆ ನಮ್ಮ ಕಾಲ್ಬಲವನ್ನು ಆಕ್ರಮಿಸ ಬೇಕಾದರೆ ಮೊದಲು ಸಮರಸೇನನ ಅಶ್ವಿಕರೊಂದಿಗೆ ಕಲೆಬೀಳ ಬೇಕಾಗುತ್ತಿತ್ತು. ಅದು ಸುಲಭ ಸಾಧ್ಯವಲ್ಲವಷ್ಟೆ ?”

“ಹೌದು ಹೌದು. ಸಮರಸೇನನು ಇದಿರಿಸ ಲಾಗದಂತಹ ಅದ್ಭುತ ವ್ಯೂಹವನ್ನೇ ಮಾಡಿದ್ದಾನೆ. ಅವನ ಯುದ್ಧ ನೈಪುಣ್ಯತೆ ಅಪಾರವೇ ಸರಿ !” ಎಂದನು ಮಂದರ ದೇವನು ನಗುತ್ತ.

“ಸಮರಸೇನನ ಊಹಿಸಲಾಗದಂತಹ ಈ ಹೊಸ ಬಗೆಯ ತಂತ್ರವು ಶತ್ರುಗಳ ಎತ್ತುಗಡೆಗಳನ್ನೆಲ್ಲ ತಾರುಮಾರು ಮಾಡಿದುವು. ತಮ್ಮವರನು

ಕಡಿಗಡಿಯುತ್ತ ಮುಂದೆ ಮುಂದೆ ಬರುತ್ತಿದ್ದ ಸಮರಸೇನನ ಸೇನಾವಾಹಿನಿ ಅವರಿಗೆ ಅಪಜಯದ ಹೆದರಿಕೆ ಹುಟ್ಟಿಸತೊಡಗಿತು. ಅವರು ಮುಂದೆ ಬರುವ ಪ್ರಯತ್ನವನ್ನು ತಗ್ಗಿಸುತ್ತ ಒಂದು ಬಗೆಯ ಕ್ರಮಬದ್ಧತೆಯಲ್ಲಿಯೇ ಅಲ್ಲಲ್ಲಿ ಮೆಲ್ಲಮೆಲ್ಲನೆ ಹಿಂದೆ ಹಿಂದೆ ಜಗ್ಗತೊಡಗಿದರು.

ಸ್ವಲ್ಪ ಹೊತ್ತಿನೊಳಗೆ ಸಮರಸೇನನ ಸೇನಾ ಮುಖದಿಂದ ಶಂಖನಾದದೊಂದಿಗೆ ಜಯಜಯ ವೆಂದು ಘೋಷಣವೂ ಮೊಳಗತೊಡಗಿತು. ಅತ್ಯುತ್ಸಾಹದಿಂದ ವೇಗವೇಗವಾಗಿ ಮುಂದೆ ಬರುವ ಅವನ ಅಶ್ವಸೈನಿಕರನ್ನು ಶತ್ರುವಿನ ಆಶ್ವಿಕರು ಧೈರ್ಯದಿಂದ ಇದಿರಿಸತೊಡಗಿದರು. ಈಟಿ, ಕತ್ತಿಗಳೊಂದಿಗಿದ್ದ ಆ ಅಶ್ವಸೈನಿಕರು ಹಿಂಜರಿಯದೆ ಸರಿಸಮಾನತೆಯಿಂದ ಯುದ್ಧಝಳ ತೋರಿಸುತ್ತಲೇ ಇದ್ದರು.

ಹೀಗೆ ನಾಲ್ಕೈದು ನಿಮಿಷಗಳ ವರೆಗೆ ಭಾರಿ ಸಂಕುಲ ಸಮರವು ನಡೆದ ಮೇಲೆ ಶತ್ರು ಆಶ್ವಿಕರು ಚೆಲ್ಲಾಚೆದರಾಗಿ ಓಡಲು ತೊಡಗಿದರು. ಅವರನ್ನು ಗೆಲ್ಲುವೆವೆಂಬ ಅತ್ಯುತ್ಸಾಹದಿಂದ ಓಡಿಸುತ್ತಾ ನಮ್ಮ ಕಾಲ್ಬಲವು ಹೋಯಿತು. ಯಾವ ದಿಕ್ಕಿಗೂ ಓಡಿ ಹೋಗಲಾಗದ ಶತ್ರುಗಳು ಹಿಂದಿರುಗಿ ಪ್ರಾಣದ ಆಸೆ ಬಿಟ್ಟು ಹೋರಾಡ ತೊಡಗಿದರು. ಜೀವದ ಆಸೆ ಬಿಟ್ಟವರ ಹೋರಾಟವೆಂದ ಮೇಲೆ ಕೇಳುವುದೇನಿದೆ ?

ಈ ಸಮಯದಲ್ಲಿ ನನ್ನಲ್ಲಿದ್ದ ಭಯವೆಲ್ಲಾ ಹೋಗಿ ಧೈರ್ಯ ಬಂದಿತು. ವಿಜಯಲಕ್ಷ್ಮಿ ಸಮರಸೇನನನ್ನು ವರಿಸಲಿರುವಳೆಂದು ನನಗೆ ಬಹಳ ಸಂತೋಷ ಉಂಟಾಯಿತು. ಈ ಘಟನೆ ಎಲ್ಲರಿಗೂ ಒಂದು ಪಾಠವಾಯಿತೆಂದೂ, ಇದರಿಂದ ದೇಶದ ಅರಾಜಕತೆ ನಶಿಸಿ, ಪ್ರಶಾಂತ ಸ್ಥಿತಿ ಏರ್ಪಡುವುದೆಂದೂ, ನನಗೊಂದು ನಂಬಿಕೆ ಯುಂಟಾಯಿತು. ಅಂತಹ ಶುಭಕಾಲವು ಬಂದು ಬಿಟ್ಟರೆ, ನರವಾಹನನಂತಹ ಕುಟಿಲರ ಆಟ ನಡೆಯಲಾರದೆಂದೂ, ದ್ವೀಪರಾಜ್ಯದವರಾರೂ



ಸಂಕಟಪಡಲಾರರೆಂದೂ ನನಗೆ ತೋರಿತು. ಇದೆಲ್ಲ ನೀರ್ಗುಳ್ಳೆಯಂತಹ ಕ್ಷಣ ಭಂಗುರವಾದ ಬರಿಯ ಭ್ರಮೆಯೆಂದು ಆಗ ನಾನು ಊಹಿಸಲೂ ಇಲ್ಲ. ನಾನು ಹೀಗೆ ಸಂತೋಷದ ಆಲೋಚನೆಯಲ್ಲಿರುವಾಗ, ಶತ್ರು ಸೈನಿಕರು ಹಾಹಾಕಾರಮಾಡುತ್ತ, ಸಿಕ್ಕಾಬಟ್ಟೆ ಓಡಿಹೋಗುವ ದೃಶ್ಯ ಕಾಣಿಸಿತು. ಆ ಸೈನಿಕರನ್ನು ಸಮರಸೇನನ ಆಶ್ವಿಕರು ಈಟಿಗಳನ್ನು ನೆಗವಿಕೊಂಡು ಬೆನ್ನಟ್ಟಿ ಹೋಗುತ್ತಿದ್ದರು. ಓಡುವವರು ಈಟಿ ಕತ್ತಿಗಳಿಂದ ಸತ್ತು ಸತ್ತು ಬೀಳುತ್ತಲೂ ಇದ್ದರು. ಇತ್ತ ಕಾಲ್ಬಲದ ಸೈನಿಕರು ಯುದ್ಧದ ವಿರಾಮವನ್ನು ಅನುಭವಿಸತೊಡಗಿದ್ದರು. ಗಾಯಗೊಂಡ ಸೈನಿಕರಿಗೆ ಮದ್ದಿಟ್ಟು ಕಟ್ಟುವುದೂ, ನಡೆಸಿಕೊಂಡು ಹೋಗುವುದೂ ಕಾಣುತ್ತಿತ್ತು. ಕೆಲವರು ಸಮೀಪದಲ್ಲಿದ್ದ ಚಿಕ್ಕಕಾಲುವೆಗಿಳಿದು ದಾಹ ತೀರಿಸಿಕೊಳ್ಳುವುದೂ ಕಂಡಿತು. ನಮಗೆ ಜಯವೇ ಕೈಗೂಡಿತೆಂದು ನಂಬುವವರೆಗೂ ಬಂತು. ಅಂತಲೇ ಇನ್ನು ನಾನು ಕೋಟೆಯ ಬುರುಜಿನಿಂದ ಕೆಳಗಿಳಿದು ಪಟ್ಟಣದ ದ್ವಾರಗಳನ್ನು ತೆರೆಯಿಸಬೇಕೆಂದು ಯೋಚನೆ ಮಾಡಿದೆ. ವಿಜಯಶಾಲಿಯಾಗಿ ಉತ್ಸಾಹದಿಂದ ಹಿಂದಿರುಗುವ ಸಮರಸೇನನಿಗೂ, ಅವನ ವೀರ ಸೈನಿಕರಿಗೂ ಘನ ರೀತಿಯಲ್ಲಿ ಸ್ವಾಗತ ಮಾಡಬೇಕಾದ ಬಾಧ್ಯತೆ ನನ್ನದಿದ್ದಿತು. ಆದರೆ ನಾನು ಬುರುಜಿನ ಮೇಲಿನಿಂದ ಕೆಳಗಿಳಿಯ ಬೇಕೆಂದಿರುವಾಗ, ಒಮ್ಮಿಂದೊಮ್ಮೆಗೆ ಸೈನ್ಯದಲ್ಲಿ ವಿಜಯಘೋಷಕ್ಕೆ ಬದಲಾಗಿ ಹಾಹಾಕಾರಗಳು ಕೇಳತೊಡಗಿದುವು. ಏನಾಯಿತೋ ಎಂಬ ದಿಗಿಲು ಒಮ್ಮೆಗೇ ನನ್ನನ್ನು ಕವಿಯಿತು.

ನಾನು ಗಾಬರಿಯಿಂದ ಸ್ತಬ್ಧನಾಗಿ ಹಾಗೇ ನಿಂತುಬಿಟ್ಟೆ. ಅತ್ತ ಕಡೆಗೇ ಕಣ್ಣುಬಿಟ್ಟು ನೋಡುತ್ತಿರುವಾಗ ಯುದ್ಧರಂಗದಲ್ಲಿ ಒಂದು ದಿಬ್ಬೆಯಂತೆ ಎತ್ತರವಾದ ಸ್ಥಳದಲ್ಲಿ ಸೈನಿಕರನೇಕರು ಒಟ್ಟುಗೂಡತೊಡಗಿದರು. ಇದೆಂತಹ ವಿಚಿತ್ರ ಪರಿಣಾಮವೋ ಎಂದು ನಾನು ಆಲೋಚಿಸಿಕೊಂಡಿದ್ದಾಗ, ಹತ್ತು ಮಂದಿ ಅಶ್ವಸೈನಿಕರು ಮಹಾವೇಗದಿಂದ ಪಟ್ಟಣದ





ದ್ವಾರಗಳ ಕಡೆಗೆ ತಮ್ಮ ಕುದುರೆಗಳನ್ನು ಓಡಿಸಿಕೊಂಡು ಬರತೊಡಗಿದರು. ಏನಾಯಿತು ? ಹಾಗೇಕೆ ಓಡಿ ಬರುತ್ತಿದ್ದಾರೆ ?

ನಾನು ತುಂಬಾ ಕಳವಳಕ್ಕೀಡಾದೆನು. ಏನೋ ಊಹಿಸಲಾಗದ ಕೆಟ್ಟ ಪರಿಣಾಮವೇ ನಡೆದಿರುವಂತೆ ತೋರಿತು. ದ್ವಾರಗಳ ಕಡೆಗೆ ಬರುವ ಹತ್ತು ಜನ ಅಶ್ವಿಕರು ಏನೋ ಸುದ್ದಿ ತರುವವರಾಗಿರಬೇಕೆಂದು ಅಂದುಕೊಂಡೆನು.

ಆದುದರಿಂದ ನಾನು ಬೇಗಬೇಗನೇ ಬುರುಜಿನ ಮೇಲಿನಿಂದ ಕೆಳಗಿಳಿದು ನನ್ನ ಕುದುರೆಯನ್ನೇರಿಕೊಂಡು, ನನ್ನೊಂದಿಗೆ ಬರುವಂತೆ ಅನುಚರರಿಗೆ ಹೇಳಿ ಪಟ್ಟಣ ದ್ವಾರದ ಬಳಿಗೆ ದೌಡಾಯಿಸಿ ಹೋದೆ. ಬೇಗನೇ ದ್ವಾರವನ್ನು ತೆರೆಯಿಸಿದ್ದೇ ತಡ, ಹತ್ತು ಮಂದಿ ಅಶ್ವಿಕರೂ ಸುಳಿಗಾಳಿಯ ವೇಗದಲ್ಲಿ ಒಳಗೆ ನುಗ್ಗಿ ಬಂದು, ಒಂದೇ ಸಮಯದಲ್ಲಿ ಹತ್ತು ಕೊರಳುಗಳಿಂದ ದಿಕ್ಕುಗಳು ತತ್ತರಿಸುವಂತೆ 'ನರವಾಹನ ಮಿಶ್ರ ಮಹಾರಾಜರಿಗೆ ಜೈ!' ಎಂದು ಆರ್ಭಟಿಸಿದರು ನನ್ನ ಕಿವಿಯನ್ನು ಕಿವಿಯುವ ಹಾಗೆ.

ದೊಡ್ಡ ದ್ರೋಹವೇ ನಡೆದಿದೆಯೆಂದು ಕೂಡಲೇ ನನಗೆ ಗೊತ್ತಾಯಿತು. "ದ್ರೋಹಿಗಳನ್ನು ಕೊಲ್ಲಿರಿ. ಮಹಾಘಾತ ! ಕಡಿಯಿರಿ !" ಎಂದು ನಾನು ಗರ್ಜಿಸಿ ಕುದುರೆಯನ್ನು ಅವರ ಮೇಲೆ ಹಾರಿಸಿದೆ. ಆಗಲೇ ನನ್ನ ಕತ್ತಿಯ ಬೀಸಿಗೆ ಇಬ್ಬರ ತಲೆಗಳು ಹಾರಿತು. ನನ್ನ ಅನುಚರರು ಕೂಡಾ ತಮ್ಮ ಕುದುರೆಗಳನ್ನು ಅವರ ಮುಂದೆ ಹಾರಿಸಿ ಉಳಿದ ಎಂಟು ಮಂದಿಗಳನ್ನು ಇದಿರಿಸಿದರು.

ಬೀದಿ ಹಿಡಿದು ಸಾಲುಗಟ್ಟಿನಿಂತ ಸೈನಿಕರೂ, ಆಯುಧ ಧಾರಿಗಳಾದ ಪ್ರಜೆಗಳೂ ನಿಮಿಷಕಾಲ ತಟಸ್ಥರಾಗಿಯೇ ನಿಂತಿದ್ದರು. ಇದ್ದಕ್ಕಿದ್ದಹಾಗೆ ಆ ಸೈನಿಕರಲ್ಲಿ ಕೆಲವರು "ನರವಾಹನ ಮಹಾರಾಜರಿಗೆ ಜೈ !" ಎಂದು ಕೂಗಿ ಕತ್ತಿ ಹಿರಿದರು. ಅದಕ್ಕೆ ಪ್ರತಿಧ್ವನಿಯಾಗಿ "ಸಮರಸೇನ ಮಹಾರಾಜರಿಗೆ ಜೈ!" ಎಂದು ಇದಿರಾಳಿಗಳು ಗರ್ಜಿಸಿದರು.

ಮತ್ತೆ ನಡೆದುದನ್ನು ಏಟು ಹೇಳಲಿ ? ಎಲ್ಲಿ ನೋಡಿದರೂ ಎರಡೆರಡು ಜಯಘೋಷಗಳು ! ಆಗ ನಡೆದ ಗಂದರಗೋಳವನ್ನು ಯುದ್ಧವೆನ್ನಲು ಸಾಧ್ಯವಿಲ್ಲ. ಆಯುಧ ಧಾರಿಯಾದ ಪ್ರತಿಯೊಬ್ಬನಿಗೂ, ಇನ್ನೊಬ್ಬ ಆಯುಧಧಾರಿ ಶತ್ರುವೇ. ತನ್ನ ಬದಿಯಲ್ಲಿ ಮತ್ತೊಬ್ಬನೊಂದಿಗೆ ಕತ್ತಿಕಾಳಗ ಮಾಡುವವನು ಮಿತ್ರನೋ ಶತ್ರುವೋ ಆ ಪಕ್ಕದವನಿಗೆ ತಿಳಿಯದು. ಯಾರು ಯಾರಿಗೆ ಏತಕ್ಕಾಗಿ ಜಯಘೋಷ ಮಾಡುತ್ತಾರೆಂಬುದು ಅರ್ಥವಾಗಿ ಯುದ್ಧಮಾಡುವಂತೆಯೂ ಕಾಣಲಿಲ್ಲ. ಯಾರ ಬಾಯಿಯಿಂದ ಯಾವ ನಿನಾದವೇಳುತ್ತದೆಂದು ಕೇಳದಷ್ಟು ಹುಚ್ಚು ಗಲಾಟೆ ! ಯಾರಿಗೆ ಯಾರು ಶತ್ರುವೋ ಮಿತ್ರನೋ ತಿಳಿಯದಂತೆ ಒಟ್ಟು ಅಂತಕನ ಕೋಲಾಹಲವಾಗಿತ್ತು ಅದು.




ನಾನು ಕೂಡಾ ಹೋರಾಟ ನಡೆಸುತ್ತ ನನ್ನ ಅನುಚರರೊಂದಿಗೆ ಹೋಗುತ್ತಾ ಇದ್ದೆ. ದ್ವಾರ ರಕ್ಷಕರು ನನ್ನನ್ನು ನೋಡಿದ ಕೂಡಲೇ ಒಳಗಿನ ಕೋಟೆಯ ದ್ವಾರವನ್ನು ತೆರೆದರು. ನಾನು ಒಳಗೆ ಪ್ರವೇಶಿಸಿದ ಕೂಡಲೇ ದ್ವಾರವನ್ನು ಮುಚ್ಚಿಬಿಟ್ಟರು. ಹೀಗೆ ಗಲಾಟೆಯ ನಡುವೆ ಸಿಕ್ಕಿಬಿದ್ದ ನಾನು ತಾತ್ಕಾಲಿಕವಾಗಿ ಬಿಡುಗಡೆಗೊಂಡು ಅರ್ಥವಿಲ್ಲದೆ ಯುದ್ಧ ಮಾಡಲು ಇಷ್ಟವಿಲ್ಲದೆ, ಕೋಟೆಯೊಳಗೆ ಪ್ರವೇಶಿಸಿ ಬಿಟ್ಟೆನು.

ಹೊರಗೆ ಬೀದಿಯಲ್ಲಿ ಸಂಕುಲ ಸಮರವು ನಡೆಯುತ್ತಲೇ ಇದ್ದಿತು. ಅಲ್ಲಿಯ ಒಂದು ಭಾಗದ ಪ್ರಜೆಗಳು ಸಮರಸೇನನ ಪಕ್ಷದವರು. ಉಳಿದವರೆಲ್ಲ ನರವಾಹನನ ಪಕ್ಷದವರು. ಅವರೊಳಗೆ ನರವಾಹನನ ಪಕ್ಷದವರೇ ಹೆಚ್ಚಾಗಿರುವಂತೆ ಗೊತ್ತಾಗುತ್ತಿತ್ತು. ಯುದ್ಧರಂಗದಲ್ಲಿ ನಿಜವಾಗಿಯೂ ಏನು ನಡೆಯಿತೆಂದು ತಿಳಿದರೆ ಹೊರತು ನಿಜವು ಏನೆಂದು ಗೊತ್ತಾಗುವಂತಿಲ್ಲ. ನಾನು ನನ್ನ ಅನುಚರನೊಬ್ಬನನ್ನು ಕರೆದು ರಹಸ್ಯದ್ವಾರದ ಮೂಲಕ ಹೋಗಿ ನಿಜಸಂಗತಿಯನ್ನು ತಿಳಿದು ಬರುವಂತೆ ಅವನನ್ನು ಯುದ್ಧಭೂಮಿಗೆ ಕಳುಹಿಸಿದೆ.

ಈಗ ನಾನು ಮಾಡಬೇಕಾದುದು ಏನು ? ಪಟ್ಟಣದೊಳಗಿರುವ ನರವಾಹನನ ಅನುಚರರು ಮುಂದೇನು ಮಾಡುವರೆಂದು ನೋಡಬೇಕು. ಅವರು ತಮ್ಮನ್ನು ಇದಿರಿಸಿದವರನ್ನು ಮಟ್ಟ ಮಾಡಿದ ಮೇಲೆ ಕೋಟೆಯನ್ನು ಪೂರ್ತಿ ವಶಪಡಿಸಿಕೊಳ್ಳುವರೋ ಎಂಬುದು ನನ್ನ ಸಮಸ್ಯೆ. ನಾನಂತೂ ನನ್ನ ಸರ್ವಶಕ್ತಿಯನ್ನುಪಯೋಗಿಸಿ ಕೋಟೆಯನ್ನು ರಕ್ಷಿಸಲೇಬೇಕೆಂದು ಗಟ್ಟಿಮಾಡಿಕೊಂಡೆನು. ಕೆಲವೇ ಮಂದಿ ನನ್ನ ಅನುಚರರೂ, ಕೋಟೆಯೊಳಗಿರುವ ನಲುವತ್ತು ಐವತ್ತು ಮಂದಿ ಸೈನಿಕರೂ ಕೋಟೆಯ ರಕ್ಷಣೆಗೆ ಬಹಳ ಹೊತ್ತು ತಾಳಿಕೊಳ್ಳಲಾರರೆಂದು ನನಗೆ ಗೊತ್ತೇ ಇತ್ತು. ಹಾಗೆ ಗತ್ಯಂತರವಿಲ್ಲದೆ ಹೋದಾಗ, ಈ ಮೊದಲು ಮಾಡಿದಂತೆ, ಬೋನಿನೊಳಗಿನ ಕ್ರೂರ ಮೃಗಗಳನ್ನು ಹೊರಗೆ ಬಿಡುವುದರ ಹೊರತು ಮಾರ್ಗಾಂತರವಿರಲಿಲ್ಲ.

ಒಂದು ಗಂಟೆ ಕಳೆಯಿತು. ಹೊರಗೆ ಬೀದಿಯಲ್ಲಿ ಇನ್ನೂ ದೊಂಬಿಯುದ್ಧ ನಡೆದುಕೊಂಡೇ ಇತ್ತು. ನಾನು ಕೋಟೆಯ ರಹಸ್ಯದ್ವಾರದಿಂದ ಕಳುಹಿಸಿದ ಸೈನಿಕನು ಸ್ವಲ್ಪ ಹೊತ್ತಿಗೆ ತಿರುಗಿಬಂದನು. ನಾನು ಆತುರದಿಂದ ಅವನನ್ನು ನೋಡಲು, ಅವನು ಹೇಳಿದ ಕೆಟ್ಟ ಸಮಾಚಾರ ಕೇಳಿ ನನ್ನ ಹೃದಯಕ್ಕೇ ಶೂಲ ತಿವಿದಂತಾಯಿತು. ನನ್ನ ಶಕ್ತಿ ಪೂರಾ ಹೀರಿ ಹೋಗಿ ಬವಳಿ ಬರುವಂತಾಯಿತು,

ಶತ್ರುಗಳೊಂದಿಗೆ ನಡೆದ ಯುದ್ಧದಲ್ಲಿ ಸಮರಸೇನನು ದೊಡ್ಡ ದೊಡ್ಡ ಗಾಯಗಳಾಗಿ ಬಿದ್ದನಂತೆ. ಆದರಿಂದ ಉಪಸೇನಾಪತಿಯಾಗಿದ್ದ ನರವಾಹನನು ಮಹಾ ಸೇನಾಪತಿ ತಾನೇ ಎಂದು ಕೂಗಿ ಸ್ವೀಕರಿಸಿ

ಕೊಂಡನಂತೆ. ಆಮೇಲೆ ಕುಂಡಲಿನೀ ದ್ವೀಪಕ್ಕೆ ತಾನೇ ರಾಜನೆಂದೂ ಕೂಗಿದನು. ಹಲವರು ಅವನಿಗೆ ಜಯಘೋಷ ಮಾಡಲು ತೊಡಗಿದರು. ಅವನ ಆಜ್ಞೆಯಿಂದಲೇ ಆ ವಾರ್ತೆಯನ್ನು ಕೋಟೆಯೊಳಗಿನವರಿಗೆಲ್ಲಾ ತಿಳಿಸಲಿಕ್ಕೇ ಅನೇಕರು ನಗರದೊಳಗೆ ಪ್ರವೇಶಿಸಿದ್ದರು !

"ಈಗ ಸಮರಸೇನನ ಪರಿಸ್ಥಿತಿ ಹೇಗಿದೆ ? ಮಾತಾಡುವ ಸ್ಥಿತಿಯಲ್ಲಿದ್ದಾನೆಯೆ ? " ಎಂದು ಆತುರದಿಂದ ಆ ಸೈನಿಕನನ್ನು ಕೇಳಿದೆನು.

"ಅವರಿಗಾದ ಗಾಯಗಳು ಬಹಳ ದೊಡ್ಡವು. ಈಗಲೋ ಮತ್ತೆಯೋ ಎಂಬ ಸ್ಥಿತಿಯಲ್ಲಿದೆ. ಈ ಅವಕಾಶ ನೋಡಿಯೇ ನರವಾಹನನು ತನ್ನನ್ನು ರಾಜನೆಂದು ಪ್ರಕಟಪಡಿಸಿಕೊಂಡಿದ್ದಾನೆ. ಸೇನೆಯಲ್ಲಿದ್ದ ಚಿಕ್ಕ ಚಿಕ್ಕ ತುಕಡೀದಾರರೆಲ್ಲರೂ ಅವನನ್ನೇ ಬಲಪಡಿಸುತ್ತಿದ್ದಾರೆ " ಎಂದನು ಆ ಸೈನಿಕ.

ಇನ್ನೇನಿದೆ ? ಪರಿಸ್ಥಿತಿ ಕೈಜಾರಿಹೋಯಿತೆಂದು ಗೊತ್ತಾಯಿತು. ಸ್ವಲ್ಪಹೊತ್ತಿಗೆ ನರವಾಹನನೇ ತನಗೆ ವಶವಾದ ಸೈನ್ಯವನ್ನು ಸಾಗಿಸಿಕೊಂಡು ನಗರದೊಳಗೆ ಬಂದೇ ಬರುತ್ತಾನೆ. ಇನ್ನು ಮೇಲೆ ಅವನನ್ನು ಇದಿರಿಸುವ ಶಕ್ತಿ ಕುಂಡಲಿನೀ ದ್ವೀಪದಲ್ಲಿ ಯಾರಿಗೂ ಇರಲಾರದು. ಅವನಿಗೆ ನನ್ನ ಮೇಲೆ ದ್ವೇಷವಿರುವುದನ್ನೂ ನಾನು ಬಲ್ಲೆನು. ಇದನ್ನೆಲ್ಲ ದೃಷ್ಟಿಯಲ್ಲಿಟ್ಟುಕೊಂಡು ಸಾಧ್ಯವಾದಷ್ಟು ಬೇಗದಲ್ಲಿ ಕೋಟೆಯನ್ನು ಬಿಟ್ಟು, ನಗರವನ್ನು ಬಿಟ್ಟು, ನನ್ನ ಅನುಚರರೊಂದಿಗೆ ರಹಸ್ಯದ್ವಾರದ ಮೂಲಕ ಹೊರಬೀಳುವುದೇ ಒಳ್ಳೆಯದೆಂದು ನನಗೆ ತೋರಿತು. ಸಿಕ್ಕಿ ಬಿದ್ದು ಸಾಯುವುದರಿಂದ ಏನು ಲಾಭ ?

ಬೇಗಬೇಗನೆ ನನ್ನ ಕಡೆಯವರನ್ನೆಲ್ಲ ಒಂದುಗೂಡಿಸಿ ಪರಿಸ್ಥಿತಿಯನ್ನು ಅವರಿಗೆ ಹೇಳಿದೆ. ನನ್ನ ಅಭಿಪ್ರಾಯದೊಂದಿಗೆ ಅವರೆಲ್ಲರೂ ಏಕೀಭವಿಸಿದರು. ಇನ್ನು ಅತ್ಯಂತ ರಹಸ್ಯವಾಗಿ ಹೊರ



ಬೀಳುವ ಜಾಗರೂಕತೆ ನಮಗೆ ಬೇಕು. ರಹಸ್ಯ ದ್ವಾರವಿರುವ ಸಂಗತಿ ನರವಾಹನನಿಗೂ ಗೊತ್ತಿದ್ದಿತು. ಆದುದರಿಂದ ನಾವು ಇನ್ನಷ್ಟು ಜಾಗ್ರತೆ ತೆಗೆದುಕೊಳ್ಳಬೇಕಾಗಿತ್ತು. ಆದರೆ ಆ ರಹಸ್ಯ ದ್ವಾರದ ಹೊರತು ಬೇರೆ ಮಾರ್ಗವೂ ಇಲ್ಲದ ಪರಿಸ್ಥಿತಿಯದು.

ನನ್ನ ಅನುಚರರಿಗೆ ಎಚ್ಚರಿಕೆ ಹೇಳಿ ಅವರೊಂದಿಗೆ ಅರಮನೆಯ ರಹಸ್ಯದ್ವಾವಿರುವ ಕಡೆಗೆ ಹೊರಟೆನು. ಮನೆಯೊಳಗೆ ನಾವು ಸಾಗುತ್ತಿರುವಾಗ, ಮುಂಬಾಗಿಲಿನ ಕಡೆಯಿಂದ ದೊಡ್ಡ ದೊಡ್ಡ ಹುರಿದುಂಬಿಕೆಯ ಕೂಗಾಟಗಳು ಕೇಳತೊಡಗಿದುವು. ನರವಾಹನನ ಕಡೆಯ ಸೈನಿಕರು ಬಹಳ ಮಂದಿ ಒಳಗೆ ನುಗ್ಗಿದರೆಂದು ಗೊತ್ತಾಯಿತು. ಅವರು ಅಲ್ಲಲ್ಲಿರುವ ಬಾಗಿಲಿಗೆ ಅಡ್ಡವಾಗಿರುವ ದೊಡ್ಡ ದೊಡ್ಡ ಕಬ್ಬಿಣದ ದಿಮ್ಮಿಗಳನ್ನು ಹೊಡೆಯುತ್ತ ಮುರಿಯಲು ಪ್ರಯತ್ನಪಡುತ್ತಿದ್ದರು.

ತಟ್ಟನೆ ನನಗೊಂದು ಉಪಾಯ ಮಿಂಚಿತು. ಈ ಮೊದಲು ಮಾಡಿದ ಹಾಗೆಯೇ ಮೃಗಶಾಲೆಯ ಅಧಿಕಾರಿಯನ್ನು ಕರೆದು ಬೋನಿನೊಳಗಿನ ಕ್ರೂರ ಮೃಗಗಳನ್ನೆಲ್ಲ ಹೊರಗೆ ಬಿಡಲು ಆಜ್ಞೆ ಮಾಡಿದೆ. ಅವನು ನನ್ನನ್ನು ನೋಡಿ ಮುಗುಳುನಕ್ಕು 'ಶಿವದತ್ತರೇ, ನಿಮ್ಮ ಶತ್ರುಗಳಾರೋ ನನಗೆ ತಿಳಿಯದು. ಆದರೆ ಅವರು ಮಾತ್ರ ನಿಮಗಿಂತಲೂ ಬುದ್ಧಿವಂತರು. ಒಂದು ಗಂಟೆಯ ಕೆಳಗೆ ಮೃಗಗಳಿಗೆ ಆಹಾರ ಹಾಕಿಸಲು ಬೋನುಗಳ ಬಳಿಗೆ ಹೋದೆನು. ಬಹಳ ಆಶ್ಚರ್ಯವೇ ನಡೆದಿದೆ. ಅನೇಕ ಮೃಗಗಳು ಸತ್ತುಹೋಗಿದ್ದುವು. ಕೆಲವು ಇನ್ನೂ ನರಳುತ್ತಾ ಸಾಯಲು ಬಿದ್ದಿವೆ. ಮುಗಿಯಿತು ಅವುಗಳ ಕತೆ' ಎಂದನು.

ಕೂಡಲೇ ನಾನು ಬೋನುಗಳ ಕಡೆಗೆ ಓಡಿದೆ. ಮೃಗ ಶಾಲಾಧಿಪತಿ ಹೇಳಿದ ಮಾತಿನಲ್ಲಿ ಸುಳ್ಳೇನೂ ಇರಲಿಲ್ಲ. ಆದರೆ, ಪ್ರಾಣಗಳಿಗೆ ವಿಷವಿಟ್ಟು ಕೊಂದವನು ಈ ಮೃಗ ಶಾಲಾಧಿಪತಿಯೇ ಏಕಾಗಬಾರದು? ಅಥವಾ ನರವಾಹನನ ಬೇರೆ ಅನುಚರರೋ ಏನೋ? ನನಗಿರುವ ಸ್ವಲ್ಪ ಮಾತ್ರ ವ್ಯವಧಿಯಲ್ಲಿ ಅನುಮಾನ ಪರಿಹರಿಸಿಕೊಳ್ಳಲು ಸಾಧ್ಯವಿರಲಿಲ್ಲ. ಯಾವುದಕ್ಕೂ ಒಳ್ಳೆಯದೆಂದುಕೊಂಡು ಆ ಮೃಗಶಾಲೆಯ ಅಧಿಪತಿಯನ್ನು ಕೈಕಾಲು ಕಟ್ಟಿಸಿ ಕೋಣೆಯ ಒಂದು ಮೂಲೆಯೊಳಗೆ ಕೆಡವಿಸಿದೆನು. ಅನಂತರ ಓಡಿದೆನು ರಹಸ್ಯ ದ್ವಾರದ ಕಡೆಗೆ.

ರಹಸ್ಯದ್ವಾರವು ಚಿತ್ರಸೇನ ರಾಜನ ಶಯನಾಗಾರದೊಳಗಿನ ಒಂದು ಮೂಲೆಯಲ್ಲಿದ್ದಿತು. ಅಲ್ಲಿಂದ ಚಿಕ್ಕದೊಂದು ಸುರಂಗವು ಪ್ರಾರಂಭವಾಗಿ, ಕೋಟೆಯನ್ನು ಬಳಸಿರುವ ಅಗಳತೆಯ ಬುಡದಿಂದಾಗಿ ಹೊರಗೆ ಮೂರು ಹರದಾರಿ ದೂರದಲ್ಲಿರುವ ಕಾಡಿನೊಳಗಿನ ದೊಡ್ಡದೊಂದು ಮರದ ಕಾಂಡದಲ್ಲಿ ಅಂತ್ಯವಾಗುತ್ತದೆ.

ನಾನು ನನ್ನ ಪಕ್ಷದವರೊಂದಿಗೆ ಚಿತ್ರಸೇನನ ಶಯನಾಗಾರವನ್ನು ಪ್ರವೇಶಿಸುವಷ್ಟರಲ್ಲಿ ಆ ಮಹಾರಾಜನ ಭೌತಿಕ ಶರೀರದ ಮಾತು ನೆನಪಿಗೆ ಬಂತು. ಅಯ್ಯೋ ಪಾಪ! ಆದರ ಗತಿ ಏನಾಯಿತೋ! ಇದುವರೆಗೂ ದಹನ ಸಂಸ್ಕಾರವೇ ನಿಲ್ಲದೆ ಆ ಶವವು ಎಲ್ಲಿಯೋ ಕೋಣೆಯೊಳಗೆ ಬಿದ್ದಿರುತ್ತದೆ. ಅವನ ಪರಿಪಾಲನೆಯೂ, ಮರಣವೂ ಎಷ್ಟು ಬೇಗದಲ್ಲಿ ಎಷ್ಟೊಂದು ವಿಷಾದಾಂತವಾಯಿತು!

ಚಿಂತೆಯ ಭಾರದಿಂದಲೇ ರಹಸ್ಯದ್ವಾರವನ್ನು ತೆರೆದು ಕೆಳಗೆ ನೋಡಿದೆ. ಕಗ್ಗಾನುಗತ್ತಲೆಯ ಸುರಂಗವಾಗಿತ್ತು! (ಇನ್ನೂ ಇದೆ)






# ಅಸೂಯೆ

ಎಷ್ಟು ತಿಂದರೂ ಮತ್ತೆ ಮತ್ತೆ ಹಸಿವೆ ಬಂದೇ ಬರುವಂತೆ, ನಿರಾಶೆಯನ್ನು ಅರಿಯದ ರಾಜಾ ತ್ರಿವಿಕ್ರಮನಿಗೆ ಮತ್ತೆ ಉತ್ಸಾಹ ಬಂದು, ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿರುವ ಶವವನ್ನು ಕೆಳಗಿಳಿಸಿ ತನ್ನ ಹೆಗಲಿಗೇರಿಸಿಕೊಂಡು ಎಂದಿನಂತೆ ಮೌನವನ್ನು ವಹಿಸಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ಈ ಅರ್ಧ ರಾತ್ರಿಯ ಹೊತ್ತಿನಲ್ಲಿ ನಿನ್ನನ್ನು ಬಿಡುವಿಲ್ಲದಂತಹ ಈ ಶ್ರಮಕ್ಕೆ ಈಡುಪಡಿಸಿದವರು ಯಾರೋ ನಿನ್ನ ಮೇಲಿನ ಅಸೂಯಾಪರರೇ ಆಗಿರಬೇಕು. ಲೋಕದಲ್ಲಿ ಅಸೂಯಾಪರರಿಗೇನೂ ಕಡಿಮೆಯಿಲ್ಲ. ದೀನಾವಸ್ಥೆಯಲ್ಲಿರುವವರ ಮೇಲೆ ದಯೆ ತೋರಿಸುವರೇ ಹೊರತು ಗೌರವ ಮಾತ್ರ ತೋರಿಸಲಾರರು. ನಾಗಣ್ಣನೆಂಬ ಸಾಮಾನ್ಯನಿಗೆ ಮೊದಲೇನೋ ತುಂಬಾ ಸಹಾಯ ಮಾಡಿ ಆಮೇಲೆ ಅಸೂಯೆಯಿಂದ ಕುದಿದು ಹೋಗುವವರ ಕಥೆ ನೆನಪಾಗುತ್ತಿದೆ. ದಾರಿಯ ಶ್ರಮ ತಿಳಿಯದಂತೆ ಅದನ್ನು ಕೇಳುತ್ತಾ ನಡೆ" ಎಂದು ಕಥೆ ಹೇಳಲು ಪ್ರಾರಂಭ ಮಾಡಿತು :

ಬೇತಾಳಕಥೆಗಳು



ಇಪ್ಪತ್ತು ವರ್ಷ ಪ್ರಾಯದವನಾದ ನಾಗಣ್ಣನು ಅನಾಥನಾಗಿ ಉಟ್ಟ ಒಂದು ಬಟ್ಟೆಯೊಂದಿಗೆ ವೀರಪುರವೆಂಬ ಆ ಊರಿಗೆ ಬಂದಿದ್ದನು. ಪ್ರಾರಂಭದಲ್ಲಿ ಆದಿಶೇಷಯ್ಯನೆಂಬ ರೈತನು ಅವನಿಗೆ ಆಶ್ರಯ ಕೊಟ್ಟನು. ಆಮೇಲೆ ಅವನು ಶಿಫಾರಸು ಮಾಡಲಾಗಿ ಗ್ರಾಮದ ಹಿರಿಯ ಗೌಡನು ನಾಗಣ್ಣನಿಗೆ ನಾಲ್ಕು ಎಕರೆ ಗದ್ದೆಗಳನ್ನು ಗೇಣಿಗೆ ಕೊಟ್ಟನು. ಅದರಿಂದ ಉತ್ಸಾಹಗೊಂಡ ನಾಗಣ್ಣನಿಗೆ ಮೈತುಂಬಾ ಕೆಲಸವಾಯಿತು. ಒಳ್ಳೆಯ ಶ್ರದ್ಧೆಯಿಂದ ಮನಸ್ಸು ಕೊಟ್ಟು ಮೈಮುರಿದು ದುಡಿಯಲು ತೊಡಗಿದನು.

ಅವನು ತನ್ನ ವ್ಯವಸಾಯವನ್ನು ಮಾಡುತ್ತ, ಬಿಡುವಿನ ವೇಳೆಯನ್ನು ಕೂಡಾ ಉಂಟುಮಾಡಿಕೊಂಡು, ಇತರರ ಕೆಲಸಗಳಿಗೂ ಸಹಾಯ ಮಾಡಲು ಹೋಗುತ್ತಿದ್ದನು. ಹೀಗೆ ಎರಡು ವರ್ಷ ಕಳೆಯುವಷ್ಟರಲ್ಲಿ ಅವನು ಸ್ವಂತವಾಗಿ ಎರಡು ಎಕರೆ ಹೊಲಗಳನ್ನೂ ಕೊಂಡುಕೊಳ್ಳುವಷ್ಟು ದೊಡ್ಡವನಾದನು. ನಾಗಣ್ಣನು ಸಾಧಿಸಿದ ಅಭಿವೃದ್ಧಿಗಾಗಿ ಆದಿಶೇಷಯ್ಯ ಬಹಳ ಸಂತೋಷಪಟ್ಟು, ಅವನಿಗೆ ವ್ಯವಸಾಯದ ಮುಖ್ಯ ಮುಖ್ಯ ಸೂಕ್ಷ್ಮ ಸುಳಿವುಗಳನ್ನು ತಿಳಿಸಿದನು. ಕೃಷಿ ಕಾರ್ಯಗಳಲ್ಲಿ ಚೆನ್ನಾಗಿ ನುರಿತವನಾದ ಆದಿಶೇಷಯ್ಯನಿಗೆ ಹತ್ತು ಎಕರೆ ಗದ್ದೆಗಳೂ, ಐದು ಎಕರೆ ಮಾವಿನ ತೋಟವೂ ಇದ್ದುವು.

ನಾಗಣ್ಣನ ಅಭಿವೃದ್ಧಿಯನ್ನು ನೋಡಿ, ಆ ಊರಿನ ದೊಡ್ಡ ರೈತನಾದ ಶರಭಯ್ಯನು ತನ್ನ ಮಗಳು ಲಕ್ಷ್ಮಿಯನ್ನು ನಾಗಣ್ಣನಿಗೆ ಕೊಟ್ಟು ಮದುವೆ ಮಾಡಲು ಮುಂದೆ ಬಂದನು. ಶರಭಯ್ಯನಿಗೆ ಇಪ್ಪತ್ತೈದು ಎಕರೆಗಳಷ್ಟು ಹೊಲಗದ್ದೆಗಳಿದ್ದವು ಮೇಲೆ ಹಣ್ಣಿನ ತೋಟಗಳೂ ಇದ್ದವು. ಮಗಳು ಒಬ್ಬಳೇ ಅವನಿಗೆ ಸಂತಾನ. ನಾಗಣ್ಣನ ಬುದ್ಧಿವಂತಿಕೆ, ನಿರಾಡಂಬರತೆ, ಮಿತವ್ಯಯತೆ ಮೊದಲಾದ ಗುಣಗಳು ಶರಭಯ್ಯನಿಗೆ ತುಂಬಾ ಹಿಡಿಸಿತ್ತು.

ನಾಗಣ್ಣನು ಮೊತ್ತ ಮೊದಲು ತನಗೆ ಆಶ್ರಯ ಕೊಟ್ಟ ಆದಿಶೇಷಯ್ಯನೊಡನೆ ಮದುವೆಯ ವಿಷಯದಲ್ಲಿ ಸಲಹೆ ಕೇಳಿದನು. ನಾಗಣ್ಣನು ಈ ಮದುವೆ ಮಾಡಿಕೊಂಡುಬಿಟ್ಟರೆ ಅವನು ತನಗಿಂತಲೂ ಹೆಚ್ಚಿನ ಆಸ್ತಿವಂತನಾಗುವನೆಂದು ಆದಿಶೇಷಯ್ಯನಿಗೆ ಭಯವಾಯಿತು. ತನ್ನಿಂದ ಮೇಲೆ ಬಂದ ಪೋರ ತನಗಿಂತ ದೊಡ್ಡವನಾಗುವುದೆಂದರೆ ಸಹಿಸುವುದು ಹೇಗೆ ?"

"ನಾಗಣ್ಣಾ, ಮಾವನ ಮನೇ ಅಳಿಯನಾಗಿ ಬದುಕುವುದೆಂದರೆ ಗಂಡಸಾದವನಿಗೆ ಅದಕ್ಕಿಂತ ನೀಚ ಜೀವಿತ ಬೇರೊಂದಿಲ್ಲ. ಯೋಚಿಸಿ ನೋಡಿಕೋ. ನನಗೇನೋ ಈ ಮದುವೆ ಇಷ್ಟವಿಲ್ಲ," ಎಂದನು ಆದಿಶೇಷಯ್ಯ.

ನಾಗಣ್ಣ ಈ ಸಂಗತಿಯನ್ನು ಶರಭಯ್ಯನೊಂದಿಗೆ ಹೇಳಿದನು. ಶರಭಯ್ಯನು ಶಾಂತನಾಗಿಯೇ, "ನಾಗಣ್ಣಾ, ನನ್ನ ಮಗಳು ಲಕ್ಷ್ಮಿ ನಿನ್ನನ್ನೇ ಮದುವೆಯಾಗಬೇಕೆಂದು ಹೇಳುತ್ತಾಳೆ. ನೀನು ಮನೆಯ

ಅಳಿಯನಾಗಿ ಇರಬೇಕಾಗಿಲ್ಲ. ಎಲ್ಲಾ ಆಸ್ತಿಯನ್ನೂ ನಿನ್ನ ಹೆಸರಿಗೇ ಬರೆದುಬಿಡುತ್ತೇನೆ. ನಿನ್ನ ಹಂಗಿನಲ್ಲೇ ನಾನೂ ಇರುತ್ತೇನೆ ಬಿಡು. ನನಗೇನು ಬೇಕಾಗಿದೆ ? ಈ ಮದುವೆ ಸಾಧ್ಯವಿಲ್ಲವೆನ್ನಬೇಡ " ಎಂದನು. ನಾಗಣ್ಣನು ಮದುವೆಗೆ ಒಪ್ಪಿಬಿಟ್ಟನು. ಅವನಿಗೆ ಲಕ್ಷ್ಮಿಯೊಂದಿಗೆ ವೈಭವದಲ್ಲಿ ಮದುವೆಯಾಗಿ ಹೋಯಿತು. ಆ ದಿನದಿಂದ ಆದಿಶೇಷಯ್ಯ ನಾಗಣ್ಣನೊಂದಿಗೆ ಮಾತಾಡುವುದನ್ನು ಬಿಟ್ಟನು.

ಆದರಿಂದ ನಾಗಣ್ಣನಿಗೆ ಬಹಳ ಸಂಕಟವಾಯಿತು. ಒಂದು ದಿನ ಅವನು ಆದಿಶೇಷಯ್ಯನ ಮನೆಗೆ ಹೋಗಿ, " ನಾನೇನಾದರೂ ತಪ್ಪು ಮಾಡಿದ್ದರೆ ಕ್ಷಮಿಸಿ ಬಿಡಿರಿ. ನಾನು ಇಷ್ಟರವರೆಗೆ ಬಂದಿದ್ದೇನೆಂದರೆ ಅದಕ್ಕೆ ಕಾರಣವು ನೀವೇ. ನಿಮ್ಮ ಆದರಣೆ ಇಲ್ಲದಿದ್ದರೆ ನಾನು ಈ ಊರಿನಲ್ಲಿ ಒಂದು ಕ್ಷಣ ಕೂಡಾ ಇರಲಾರೆ " ಎಂದನು.

ಆದಿಶೇಷಯ್ಯ ನಾಗಣ್ಣನ ವಿನಯ ವಿಧೇಯತೆಗಳಿಂದ ಪ್ರಸನ್ನನಾದನು. ಬಹಳ ಸಂತೋಷಪಟ್ಟು " ನನ್ನ ಉಪಕಾರದ ಸಂಗತಿ ಇನ್ನೂ ನೆನಪಿಟ್ಟುಕೊಂಡಿರುವೆಯಾ ? ಒಳ್ಳೇದಪ್ಪಾ, ನೀನು ಅಭಿವೃದ್ಧಿಗೆ ಬರುವುದು ನನಗೆ ಸಂತೋಷವೇ. ಇನ್ನೂ ಅಭಿವೃದ್ಧಿಗೆ ಬಾರಪ್ಪ " ಎಂದು ಹರಸಿದನು.

ಆ ವರ್ಷದಲ್ಲಿ ಕಾಲಕ್ಕೆ ಬರಬೇಕಾದ ಮಳೆ ಬಾರದೇ ಹೋಯಿತು. ಪೈರುಗಳೆಲ್ಲ ಬಹಳ ಮಟ್ಟಿಗೆ ಬಾಡಿ ನಾಶವಾದುವು. ಆದರೆ ನಾಗಣ್ಣ ಮೊದಲೇ ಜಾಗರೂಕನಾಗಿ ಕೆಲಸ ಮಾಡಿದುದರಿಂದ ಅವನ ಗದ್ದೆಗಳು ಚೆನ್ನಾಗಿಯೇ ಬೆಳೆ ಕೊಟ್ಟುವು. ಆದಿಶೇಷಯ್ಯನಿಗೆ ಭಾರಿ ನಷ್ಟವಾಗಿ ಹೋಗಿತ್ತು. ಆದರಿಂದ ನಾಗಣ್ಣನ ಮೇಲೆ ಅವನಿಗೆ ಅಸೂಯೆಯುಂಟಾಯಿತು.

ಆತನಿಗಾದ ನಷ್ಟವನ್ನು ತಿಳಿದು ನಾಗಣ್ಣ ಒಂದು ದಿನ ಅವನನ್ನು ನೋಡಲು ಹೋದನು. ಆಗ ಆದಿಶೇಷಯ್ಯ ಕೋಪದಿಂದ ಹುಬ್ಬು ಸುರುಗಿಸಿಕೊಂಡು " ಈಗೀಗ ನೀನು ನಡೆದುಕೊಳ್ಳುವ ರೀತಿ ನನಗೇನೂ ಹಿಡಿಸಲಿಲ್ಲ ನಾಗಣ್ಣಾ ! ಬಹಳ ಜಾಣ





ನಾಗಿ ಬಂದಹಾಗೆ ಸ್ವಾರ್ಥವೇ ಹೆಚ್ಚಾಗುತ್ತಾ ಇದೆ ನಿನ್ನಲ್ಲಿ. ವ್ಯವಸಾಯದಲ್ಲಿ ನನಗೆ ತಿಳಿದಿರುವ ಸೂಕ್ಷ್ಮ ವಿಷಯಗಳನ್ನೆಲ್ಲ ನಿನಗೆ ತಿಳಿಸಿದ್ದೇನೆ. ನೀನು ಮಾತ್ರ ಮಳೆಯಿಲ್ಲದಿರುವಾಗ ಏನೇನು ಮಾಡಿ ಸಮಾಳಿಸಿಕೊಂಡೆಯೆಂಬುದನ್ನು ನನಗೆ ತಿಳಿಸಿದೆ ಯೇನು ? ಬಹಳ ಗಟ್ಟಿಗನಾದೆ ಬಿಡು " ಎಂದು ಜರೆದನು.

ನಾಗಣ್ಣ ವಿನಯದಿಂದ " ಹಾಗೇನೂ ಮಾಡಿಲ್ಲ ಸ್ವಾಮಿ ! ಕೆರೆ, ಬಾವಿಗಳನ್ನು ಆಳಪಡಿಸಿದೆ. ಅದರಲ್ಲಿ ಸ್ವಾರ್ಥವೇನೂ ಕಾಣುವುದಿಲ್ಲ. ಎಲ್ಲವೂ ನೀವು ಕಲಿಸಿದ್ದೇ. ನಿಮ್ಮ ಆಶೀರ್ವಾದವೇ. ನನಗೆ ಲಾಭ ಬಂದರೆ ಅದೂ ನಿಮ್ಮ ಒಳ್ಳೆಯ ಮನಸ್ಸಿನಿಂದಲೇ !" ಎಂದು ಹೊಗಳುತ್ತಾ ಹೇಳಿದನು.

ಆದರಿಂದ ಆದಿಶೇಷಯ್ಯ ಸಂತೋಷಪಟ್ಟು ಎಂದಿನಂತೆ ಅವನೊಡನೆ ಮಾತಾಡತೊಡಗಿದನು. ಆದರೆ ಅವನ ಮನಸ್ಸಿನಲ್ಲಿ ಏನೋ ಕೊರಗು.

ನಾಗಣ್ಣನು ತನ್ನ ಪೂರ್ತಿ ಶ್ರದ್ಧೆಯನ್ನು ವ್ಯವಸಾಯ ದಲ್ಲೇ ತೋರಿಸಿಕೊಂಡಿದ್ದರೆ ಬೇಗದಲ್ಲೇ ಅವನು ಊರನ್ನೇ ಕೊಂಡುಕೊಳ್ಳುವಷ್ಟು ದೊಡ್ಡವನಾಗುವ ನೆಂದು ಆದಿಶೇಷಯ್ಯನಿಗೆ ಅನುಮಾನವಾಯಿತು.

ಒಂದು ದಿನ ಅವನು ನಾಗಣ್ಣನೊಂದಿಗೆ " ನಾಗಣ್ಣಾ ನೀನು ಚೆನ್ನಾಗಿಯೇ ಸಂಪಾದನೆ ಮಾಡುತ್ತಾ ಇರುವಿ. ಇನ್ನೂ ಏತಕ್ಕಾಗಿ ರಾತ್ರಿ ಹಗಲು ಕಷ್ಟ ಪಟ್ಟು ಕೆಲಸ ಮಾಡಬೇಕು ? ನಿನ್ನ ದೃಷ್ಟಿಯನ್ನು ಸ್ವಲ್ಪ ಕಲೆಗಳ ಮೇಲೆ ತಿರುಗಿಸಬಾರದೇನು ? ಅದ ರಲ್ಲಿಯೂ ನಿನಗೆ ಹೆಸರು ಬರುತ್ತದೆ. ಸ್ವತಃ ಬುದ್ಧಿ ವಂತನಾದ ನೀನು ಪ್ರಯತ್ನಿಸಿದರೆ ನಿನ್ನ ಹೆಸರು ಹತ್ತು ಊರುಗಳಿಗೆ ತಿಳಿಯುತ್ತದೆ. ಅದು ನನಗೂ ಸಂತೋಷ " ಎಂದನು.

ನಾಗಣ್ಣನಿಗೆ ಕವಿತ್ವದ ಮೇಲೆ ಇಷ್ಟವಿದ್ದಿತು. ಅಂತಲೇ ಕೆಲವು ದಿನಗಳವರೆಗೆ ಕಾವ್ಯಪಠನೆಗೆ ತೊಡಗಿ ಆಮೇಲೆ ತಾನೇ ಒಂದು ಕಾವ್ಯವನ್ನು ರಚಿಸುವಷ್ಟು ಸಮರ್ಥನಾದನು. ಹಾಗೆ ತಾನು ಬರೆದ ಕಾವ್ಯವನ್ನು ಗ್ರಾಮಸ್ಥರ ಮುಂದೆ ಓದಿ ತೋರಿಸಿದನು.

ಅದನ್ನು ಕೇಳಿದ ಪಂಡಿತನೊಬ್ಬನು " ಆ ಕಾವ್ಯ ವಷ್ಟೂ ತಪ್ಪುಗಳೇ, ತುಂಬಾ ಅಶುದ್ಧ ಕೃತಿ. ಎಷ್ಟೋ ತಿದ್ದುಪಡಿಯಾಗಬೇಕು." ಎಂದು ಎಗತಾಳಿ ಮಾಡಿದನು. ಅದನ್ನು ಕೇಳಿ ಗ್ರಾಮಸ್ಥರೆಲ್ಲ ನಗುವಾಗ ಆದಿಶೇಷಯ್ಯ ಒಳಗೊಳಗೇ ಸಂತೋಷಪಟ್ಟನು.

ಆದರೆ ನಾಗಣ್ಣನು ಹಟ ಬಿಡಲಿಲ್ಲ, ಅವನು ಅದೇ ಪಂಡಿತನ ಮನೆಗೆ ಹೋಗಿ ನಮಸ್ಕಾರ ಮಾಡಿ, " ಅಯ್ಯಾ, ತಾವು ಗೇಲಿ ಮಾಡಿದಿರೆಂದು ನನಗೇನೂ ನೋವಿಲ್ಲ. ನನ್ನ ಒಳಿತಿಗೇ ಎಂದು ತಿಳಿದು ಬಂದಿದ್ದೇನೆ. ತಪ್ಪುಗಳನ್ನು ಎತ್ತಿ ತೋರಿಸಿ ಸರಿಯಾದ ರೀತಿಯನ್ನು ನೀವೇ ಹೇಳಿಕೊಡಬೇಕು " ಎಂದು ಪ್ರಾರ್ಥಿಸಿಕೊಂಡನು.

ಪಂಡಿತನು ಅವನಿಗೇನೂ ಪ್ರೋತ್ಸಾಹ ಕೊಡದೆ "ಪಾಂಡಿತ್ಯದಿಂದ ಕವಿತೆ ಕಟ್ಟಲು ಸಾಧ್ಯವಿಲ್ಲ. ಅದು ಜನ್ಮತಃ ಬಂದಿರಬೇಕು" ಎಂದನು.

ಆ ಮಾತು ಕೇಳಿ ನಾಗಣ್ಣ ನಿರುತ್ಸಾಹ ತಾಳದೆ ಆ ಪಂಡಿತನ ಬಳಿಯಲ್ಲೇ ಶಿಷ್ಯನಾಗಿ ಸೇರಿ ಆರು ತಿಂಗಳುಗಳಲ್ಲಿ ತನ್ನ ಭಾಷೆಯನ್ನು ಬೆಳಗಿಸಿಕೊಂಡನು. ಆಮೇಲೆ ಬೇರೆ ಬೇರೆ ಕವಿಗಳು ಬರೆದ ಗ್ರಂಥಗಳನ್ನು ಓದಿ ಕವಿತ್ವದ ಸೂಕ್ಷ್ಮಗಳನ್ನೆಲ್ಲ ತಿಳಿದುಕೊಂಡನು.

ಮುಂದೆ ಒಂದು ವರ್ಷದೊಳಗೆ ನಾಗಣ್ಣನು ಮತ್ತೊಂದು ಕಾವ್ಯವನ್ನು ಬರೆದು ಅದನ್ನು ಗ್ರಾಮಸ್ಥರ ಮುಂದೆ ಓದಿ ತೋರಿಸಿದನು. ಆಗ ಒಂದು ವಿಚಿತ್ರವು ನಡೆಯಿತು. ಮಾರುವೇಷದಲ್ಲಿ ದೇಶಾಟನೆ ಮಾಡಿಕೊಂಡಿದ್ದ ಆ ದೇಶವನ್ನಾಳುವ ರಾಜನು ಜನರ ಗುಂಪಿನಲ್ಲಿದ್ದು ಆ ಕಾವ್ಯವನ್ನು ಕೇಳಿದನು. ಅವನಿಗೆ ಅದು ಬಹಳವಾಗಿ ಹಿಡಿಸಿತು.

ಎಷ್ಟರ ಮಟ್ಟಿಗೆ ಹಿಡಿಸಿತೆಂದರೆ, ಅವನು ತನ್ನ ನಿಜರೂಪವನ್ನು ಎಲ್ಲರ ಮುಂದೆ ಬಯಲುಪಡಿಸಿ, "ನಾನು ಎಷ್ಟೋ ಕವಿಗಳ ಕೃತಿಗಳನ್ನು ನೋಡಿದ್ದೇನೆ. ಎಲ್ಲರೂ ಸಂಸ್ಕೃತ ಕಾವ್ಯಗಳನ್ನು ಕನ್ನಡದಲ್ಲಿ ಅನುವಾದ ಮಾಡಿದರೇ ಹೊರತು, ಕನ್ನಡದಲ್ಲೇ ಬರೆದ ಇಷ್ಟು ದೊಡ್ಡ ಕಾವ್ಯವನ್ನು ನಾನು ನೋಡಲಿಲ್ಲ. ನಾಗಣ್ಣಾ, ನೀನು ರಾಜಧಾನಿಗೆ ಬಂದರೆ ನಿನ್ನನ್ನು ತಕ್ಕ ರೀತಿಯಲ್ಲಿ ಸನ್ಮಾನಿಸುತ್ತೇನೆ. ಆಗುವುದಿಲ್ಲ ಎನ್ನಬೇಡ" ಎಂದನು.

ರಾಜನ ಮಾತು ಕೇಳಿ ಅನೇಕರಿಗೆ ಆಶ್ಚರ್ಯವಾಯಿತು. ಅವನ ಗುರುವಾದ ಪಂಡಿತನೂ, ಆದಿಶೇಷಯ್ಯನೂ ಅವನೊಡನೆ ಮಾತಾಡುವುದನ್ನು ಬಿಟ್ಟರು. ನಾಗಣ್ಣನು ಅವರ ಮನೆಗಳಿಗೆ ಹೋಗಿ ತನಗೆ ಬಂದ ಯೋಗಗಳಿಗೆಲ್ಲಾ ಅವರ ಉದಾರ ಗುಣವೇ ಕಾರಣವೆಂದು ಹೇಳಿ ಅವರನ್ನು ಹೊಗಳಿದ



ಮೇಲೆ ಅವರ ಅಸೂಯೆ ಶಾಂತವಾಯಿತು. ತನ್ನೊಂದಿಗೆ ರಾಜನ ಬಳಿಗೆ ಅವರೂ ಬರಬೇಕೆಂದು ಒತ್ತಾಯಪಡಿಸಿದನು.

ಹಾಗೆ ನಾಗಣ್ಣನು ತನ್ನೊಂದಿಗೆ ಅವರನ್ನೂ ಕೂಡಾ ಕರೆದುಕೊಂಡೇ ರಾಜಧಾನಿಗೆ ಹೋದನು. ರಾಜನೊಂದಿಗೆ ಅವನು ಅವರನ್ನು ಕುರಿತು ಹೇಳಿದ ಮೇಲೆ ಅವರಿಗೂ ಕೂಡಾ ರಾಜನಿಂದ ಸನ್ಮಾನ ನಡೆಯಿತು. ಹೀಗೆ ನಾಗಣ್ಣನಿಂದಾಗಿ ಅವರಿಬ್ಬರಿಗೂ ಘನವಾದ ರಾಜ ಸನ್ಮಾನವು ದೊರಕಿದುದರಿಂದ ನಾಗಣ್ಣನ ಮೇಲೆ ಅವರಿಗಿದ್ದ ಅಸೂಯೆ ಪೂರಾ ಹೋಯಿತು. ಅವನ ಖ್ಯಾತಿಯನ್ನು ಕೇಳಿ ಅವರೂ ಸಂತೋಷಿಸಲು ತೊಡಗಿದರು.

ಈ ಸ್ಥಿತಿಯಲ್ಲಿ ಒಂದು ದಿನ ನಾಗಣ್ಣ ಹೆಂಡತಿಯೊಂದಿಗೆ, "ಇನ್ನು ನಾವು ಈ ಊರಿನಲ್ಲಿ ನೆಲೆಸಿರಲು ಸಾಧ್ಯವಿಲ್ಲ. ಬೇರೆ ಯಾವುದಾದರೂ ಊರಿಗೆ ಹೋಗಬೇಕಾದದ್ದೇ. ಇಲ್ಲಿರುವ ನಮ್ಮ ಆಸ್ತಿ

ಪಾಸ್ತಿಗಳನ್ನೆಲ್ಲ ಮಾರಿಬಿಡಲು ಪ್ರಯತ್ನಿಸುತ್ತೇನೆ. ನೀನೂ ಬೇಕಾದ್ದು ಗಂಟುಕಟ್ಟಿ ಸಿದ್ಧಳಾಗು " ಎಂದನು.

ನಾಗಣ್ಣನ ಹೆಂಡತಿಗೆ ಅತ್ಯಾಶ್ಚರ್ಯವಾಯಿತು. ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, " ನಾಗಣ್ಣನ ಪ್ರವರ್ತನೆ ವಿಚಿತ್ರವಾಗಿಯೂ ಅಸಂದರ್ಭವಾಗಿಯೂ ಕಾಣುವುದಿಲ್ಲವೇನು ? ಅವನು ಒಂದು ವೇಳೆ ಊರು ಬಿಟ್ಟು ಹೋಗುವವನಾಗಿದ್ದರೆ, ತನ್ನನ್ನು ನೋಡಿ ಅಸೂಯೆಗೊಂಡವರನ್ನು ತಿಳಿದ ಕೂಡಲೇ ಹೋಗಿಬಿಡಬೇಕಿತ್ತು. ಈಗ ಊರೊಳಗಿನವರೆಲ್ಲಾ ಅವನನ್ನು ಅಭಿಮಾನಿಸಿಕೊಂಡಿದ್ದಾರೆ. ಹೀಗೆ ಎಲ್ಲರೂ ಸುಮುಖರಾಗಿರುವಾಗ ಊರು ಬಿಟ್ಟು ಹೋಗುವೆನೆಂದನೇಕೆ ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಸಾವಿರ ಚೂರುಗಳಾಗಿ ಸಿಡಿಯುತ್ತದೆ !" ಎಂದು ಹೇಳಿ ಸುಮ್ಮನಾಯಿತು.

" ನಾಗಣ್ಣನ ಸ್ವಭಾವವೇ ಅಂತಹುದು. ಬುದ್ಧಿಬಲದಲ್ಲಿಯೂ, ಹಟದಲ್ಲಿಯೂ ಅವನಂಥವರು ಬಹಳ ಅಪೂರ್ವ. ಯಾರಾದರೂ ಪ್ರವಾಹದ ಗುಂಟ ಈಜುತ್ತ ಸುಲಭವಾಗಿ ನದಿಯನ್ನೂ ದಾಟಿಬಿಡಬಹುದು. ಆದರೆ ನಾಗಣ್ಣನಂಥವರು ಪ್ರವಾಹಕ್ಕೆ ಇದಿರಾಗಿ ಈಜುವ ಹಟವುಳ್ಳವರಾಗಿರುತ್ತಾರೆ. ಅಂಥವರಿಗೆ ಜೀವನದ ದಾರಿಯಲ್ಲಿ ಆಗಾಗ ಏನೋ ಒಂದು ಪ್ರತಿಬಂಧಕವು ಅಡ್ಡ ಬರಬೇಕೆನಿಸುತ್ತದೆ. ಅದೇನೂ ಇಲ್ಲದಾಗ ಅವರಿಗೆ ಜೀವನವೇ ನಿಸ್ಸಾರವಾಗಿ ಕಾಣುತ್ತದೆ. ಊರೊಳಗೆ ಆದಿಶೇಷಯ್ಯನ ಅಸೂಯೆಯೂ, ಪಂಡಿತನ ಅವಹೇಳನೆಯೂ ಆಗಾಗ ಉಂಟಾಗುವುದರಿಂದ ನಾಗಣ್ಣನು ಉತ್ಸಾಹದಿಂದ ತೀವ್ರ ಪ್ರಯತ್ನ ಮಾಡಿ ವ್ಯವಸಾಯದಲ್ಲಿ ಗಟ್ಟಿಗನೆನಿಸಿದ್ದು ಮಾತ್ರವಲ್ಲದೆ, ಕವಿಯಾಗಿ ರಾಜನಿಂದಲೂ ಸತ್ಕಾರ ಪಡೆಯುವಂತಾದನು. ಅವನಿಗೆ ಇನ್ನೂ ಏನಾದರೂ ಅಡ್ಡ ಬಂದು, ದಾಟುತ್ತ ಇನ್ನಷ್ಟು ದೊಡ್ಡವನಾಗಬೇಕೆಂಬ ಆಶೆಯಿದ್ದಿತು. ಇದ್ದ ಊರಿನಲ್ಲಿ ಅವನು ಕಂಡದ್ದು ಅಸೂಯೆ ಪಡುವವರನ್ನು ಮಾತ್ರವೇ, ಪ್ರತ್ಯರ್ಥಿಗಳನ್ನಲ್ಲ. ಅಸೂಯಾಪರರನ್ನೇನೋ ಸ್ತುತಿ ಪಾಠಕರಾಗಿ ಮಾಡಿಕೊಂಡನು. ತನ್ನಲ್ಲಿ ಇನ್ನೂ ತುಂಬಿರುವ ಮಹತ್ವಾಕಾಂಕ್ಷೆಗಳಿಗೆ ಪ್ರೋತ್ಸಾಹವು ಇಂತಹ ಅಸೂಯಾಪರರ ಹೊರತು ಸರಿಯಾದ ಪ್ರತಿಸ್ಪರ್ಧಿಗಳಿಂದಲೇ ಬರಬೇಕು. ಅಂಥವರಾರೂ ಈ ಊರಿನಲ್ಲಿಲ್ಲ. ಬೇರೆ ಊರಿನಲ್ಲಿ ಇರುತ್ತಾರೆಂದುಕೊಂಡೇ ಅವನು ಆ ನಿಶ್ಚಯಕ್ಕೆ ಬಂದನು " ಎಂದು ಉತ್ತರ ಕೊಟ್ಟನು ತ್ರಿವಿಕ್ರಮ.

ಯಾವಾಗ ರಾಜನ ಮೌನಭಂಗವಾಯಿತೋ ಆಗಲೇ ಬೇತಾಳವು ಶವಸಮೇತವಾಗಿ ಅವನ ಹೆಗಲಿನಿಂದ ಮಾಯವಾಗಿ ಹೋಗಿ ಮರದ ಕೊಂಬೆ ಸೇರಿಕೊಂಡಿತ್ತು !





# ಬಿಸಿಬಿಸೀ ಸನ್ಯಾಸಿ

ಒಂದು ಊರಿನಲ್ಲಿ ರಾಮಸ್ವಾಮಿ, ರಂಗಸ್ವಾಮಿ ಎಂಬ ವ್ಯಾಪಾರ ವೃತ್ತಿಯವರಿದ್ದರು. ಒಂದೇ ವೃತ್ತಿಯವರೊಳಗೆ ಒಂದು ಬಗೆಯ ಸ್ಪರ್ಧೆ ಇರುವುದು ಸಹಜವೇ. ಆದರೆ ರಾಮಸ್ವಾಮಿ, ರಂಗಸ್ವಾಮಿಯವರೊಳಗಿನ ಸ್ಪರ್ಧೆ ಒಬ್ಬರ ಮೇಲೊಬ್ಬರಿಗೆ ಹಗೆ ಕಟ್ಟಿಕೊಳ್ಳುವಷ್ಟು ದಿನದಿಂದ ದಿನಕ್ಕೆ ಹೆಚ್ಚುತ್ತಿತು.

ಒಂದು ಸಾರಿ ಆ ಊರಿನ ಕೆರೆಗಟ್ಟೆಯ ಸಮೀಪದಲ್ಲಿರುವ ಆಲದ ಮರದ ಆಶ್ರಯದಲ್ಲಿ ಒಬ್ಬ ಸನ್ಯಾಸಿ ಬಂದು ಕುಳಿತುಕೊಂಡನು. ಗ್ರಾಮಸ್ಥರು ಒಬ್ಬರಿಬ್ಬರಾಗಿ ಬಂದು ಆತನಿಗೆ ಪ್ರಣಾಮಮಾಡಿ ಆಶೀರ್ವಾದ ಪಡೆಯ ತೊಡಗಿದರು. ಕೆಲವರು ತಮ್ಮ ಕಷ್ಟ ನೋವುಗಳನ್ನು ಹೇಳಿ ಸಹಾಯ ಕೇಳಿದರು. ಸನ್ಯಾಸಿ ಅವರಿಗೆ ಮಂತ್ರಿಸಿದ ತಾಯತ್ರನ್ನೂ, ವಿಭೂತಿಯನ್ನೂ ಕೊಡುತ್ತಿದ್ದನು. ಆದರಿಂದ ಬಹಳ ಜನರಿಗೆ ಒಳಿತಾಗಲಿಕ್ಕೂ ತೊಡಗಿತು.

ಒಂದು ದಿನ ಸಾಯಂಕಾಲದಲ್ಲಿ ಊರವರಾರೂ ಇಲ್ಲದ ಸಮಯ ನೋಡಿ, ರಾಮಸ್ವಾಮಿ ಸನ್ಯಾಸಿಯನ್ನು ನೋಡಲು ಹೋದನು. "ಅಪ್ಪಾ, ನಿನಗಿರುವ ಕಷ್ಟಗಳೇನು? ಶಾರೀರಕವೋ, ಮಾನಸಿಕವೋ? ಗ್ರಹಗಳ ಕಾಟವೊ?" ಎಂದು ಅಕ್ಕರೆಯ ಭಾವದಿಂದ ಕೇಳಿದನು ಸನ್ಯಾಸಿ.

"ಸ್ವಾಮಿ, ಅಂತಹ ಕಷ್ಟಗಳಾವುದೂ ನನಗಿಲ್ಲ. ಒಬ್ಬ ದುಷ್ಟನಿಂದಾಗಿ ನನಗೆ ಮನಃಶಾಂತಿ ಇಲ್ಲದೆ ಹೋಗಿದೆ. ಅವನ ಹೆಸರು ರಂಗಸ್ವಾಮಿ. ನನ್ನ ಹಾಗೆಯೇ ವ್ಯಾಪಾರದವನು. ದುಷ್ಟನಿಗೆ ನಷ್ಟವಾಗುವ ಹಾಗೆ ಮಾಡಿದರೆ ಅನ್ಯಾಯವೇನೂ ಇಲ್ಲವಷ್ಟೆ?" ಎಂದನು ರಾಮಸ್ವಾಮಿ.

ಸನ್ಯಾಸಿಗೆ ಅವನ ಅಭಿಪ್ರಾಯ ಅರ್ಥವಾಗಲಿಲ್ಲ.

"ನೀನು ಹೇಳುವ ಮಾತನ್ನು ನೇರಾಗಿ ಸ್ಪಷ್ಟವಾಗಿ ಹೇಳಿಬಿಡು. ನಿನ್ನ ರಹಸ್ಯವನ್ನು ನಾನು ಹೊರಗೆ ಹಾಕುವವನಲ್ಲ!" ಎಂದನು ಸನ್ಯಾಸಿ.

ರಾಮಸ್ವಾಮಿ ವಿನಯದಿಂದ ಕೈಮುಗಿದು, "ಮಹಾಸ್ವಾಮಿ, ಈ ಊರಿನ ಆ ರಂಗಸ್ವಾಮಿ ಪರಮ ದುಷ್ಟ, ನೀಚ. ಅವನಿಗೆ ಭಾರೀ ನಷ್ಟವಾಗುವ ಹಾಗೆ ನೀವು ನನಗೊಂದು ಮಂತ್ರವನ್ನು ಉಪದೇಶ ಮಾಡಿದರೆ ಸಾಕು" ಎಂದನು.

ಸನ್ಯಾಸಿ ಬೆರಗಾಗಿ ಒಂದು ನಿಮಿಷ ಸುಮ್ಮನಿದ್ದು, "ನೀನು ಕೇಳಬಾರದಂಥ ಕೋರಿಕೆಯನ್ನೇ

ಬಿ. ಎಸ್. ನಾರಾಯಣ

ಕೇಳುತ್ತಿರುವಿ. ಅದರಲ್ಲಿಯೂ ಯಾವನೋ ಒಬ್ಬ ದುಷ್ಟನೆಂದು ಹೇಳುತ್ತಿದ್ದೀಯೇ! ಸರಿ, ಪರವಾಗಿಲ್ಲ. ದುಷ್ಟನಿಗೆ ಕೆಡುಕಾಗುವಂತೆ ಮಾಡುವುದು ತಪ್ಪೇನಲ್ಲ. ಆ ರಂಗಸ್ವಾಮಿಗೆ ಸಾವಿರ ರೂಪಾಯಿಯ ನಷ್ಟವಾಯಿತೆಂದುಕೋ. ಅದು ನಿನಗೆ ಸಾಕೆನಿಸುವುದೇ ?" ಎಂದು ಕೇಳಿದನು.

"ಸಾವಿರ ರೂಪಾಯಿ ನಷ್ಟವೇ ! ನಾನು ಹೇಗಾದರೂ ತಡೆದುಕೊಂಡೇನಾದರೂ, ಅವನಿಗೆ ಅದು ಸೊಂಟ ಮುರಿದ ಹಾಗೇ ಸರಿ !" ಎಂದನು ರಾಮಸ್ವಾಮಿ ಉತ್ಸಾಹದಿಂದ.

"ಹಾಗಾದರೆ ಈ ದಿನ ರಾತ್ರಿ ಒಂದು ಯಂತ್ರವನ್ನು ತಯಾರಿಸುತ್ತೇನೆ. ಅದಕ್ಕೆ ಸಾವಿರರೂಪಾಯಿ ಖರ್ಚಾಗುತ್ತದೆ" ಎಂದನು ಸನ್ಯಾಸಿ.

ರಾಮಸ್ವಾಮಿ ಕೂಡಲೇ ಮನೆಗೆ ಹೋಗಿ ಸಾವಿರ ರೂಪಾಯಿಯನ್ನು ತಂದು ಸನ್ಯಾಸಿಗೆ ಕೊಟ್ಟನು. ಆ ಮಂತ್ರವನ್ನು ಪಡೆಯಲು ಸನ್ಯಾಸಿ ಮಾರುದಿನ ಬೆಳಿಗ್ಗೆ ಬರುವಂತೆ ಹೇಳಿದನು.

ರಾತ್ರಿ ಮೊದಲನೇ ಜಾಮದ ಆಪ್ಪೈರು ವೇಳೆಯಲ್ಲಿ ರಂಗಸ್ವಾಮಿ ಆ ಸನ್ಯಾಸಿಯ ಬಳಿಗೆಬಂದನು. ಅವನು ರಾಮಸ್ವಾಮಿಯನ್ನು ದೂರಿ ಅವನನ್ನು ದೊಡ್ಡ ನಷ್ಟಕ್ಕೆ ಗುರಿ ಪಡಿಸಲು ತಕ್ಕ ಒಂದು ಮಂತ್ರೋಪದೇಶ ಬೇಕೆಂದು ಕೇಳಿಕೊಂಡನು.

"ನೋಡಪ್ಪಾ ರಂಗಸ್ವಾಮಿ, ಈ ಮಂತ್ರಗಳು ತುಂಬಾ ಅಪಾಯಕಾರಿ. ಉಚ್ಚಾರಣೆ ತಪ್ಪಿದರೆ ಹಿಂದೇಟು ಕೊಡುವ ಭಯವುಳ್ಳದ್ದು. ನಾನೇ ಸ್ವಯಂ ಒಂದು ಯಂತ್ರ ತಯಾರಿಸಿ ಕೊಡುತ್ತೇನೆ. ಆ ಯಂತ್ರಕ್ಕೆ ಸಾವಿರ ರೂಪಾಯಿ ತಾಗುತ್ತದೆ" ಎಂದನು ಸನ್ಯಾಸಿ.

ರಂಗಸ್ವಾಮಿ ಸಾವಿರ ರೂಪಾಯಿಯನ್ನು ಆ ಸನ್ಯಾಸಿಗೆ ಕೊಟ್ಟನು. ಯಂತ್ರಕ್ಕಾಗಿ ಮರುದಿನ ಬೆಳಿಗ್ಗೆ ಬರುವಂತೆ ಹೇಳಿದನು ಸನ್ಯಾಸಿ.

ರಾಮಸ್ವಾಮಿಯೂ ರಂಗಸ್ವಾಮಿಯೂ ಸೂರ್ಯೋದಯದ ಹೊತ್ತಿನಲ್ಲಿ ಆಲದ ಮರದ ಬುಡಕ್ಕೆ ಹೋಗಿ ಬಹಳ ಆಶ್ಚರ್ಯಪಟ್ಟರು. ಅಲ್ಲಿ ಸನ್ಯಾಸಿಯ ಜಾಡೇ ಇರಲಿಲ್ಲ, ಮರದ ಕಾಂಡಕ್ಕೆ ಒಂದು ಕಾಗದವನ್ನು ನೇತಾಡಿಸಿಡಲಾಗಿತ್ತು.

ಮೊದಲು ಅದನ್ನು ಅಲ್ಲೇ ಓದಿ ತಲೆ ತಗ್ಗಿಸಿ ಕೊಂಡು ಹೋದವನು ರಂಗಸ್ವಾಮಿ. ಆಮೇಲೆ ಅವನಿಗೆ ತಿಳಿಯದಂತೆ ರಾಮಸ್ವಾಮಿ ಹೋಗಿ ಅದನ್ನು ಓದಿದನು; ಅದರಲ್ಲಿ ಹೀಗಿತ್ತು: "ನಾನು ಬೇರೆ ಕಡೆಗೆ ಹೋಗುತ್ತೇನೆ. ಒಬ್ಬರನ್ನೊಬ್ಬರು ನಷ್ಟಪಡಿಸಬೇಕೆಂಬ ನಿಮ್ಮಿಬ್ಬರ ಕೋರಿಕೆಯೂ ಈಗ ನೆರವೇರಿತಪ್ಪೇ? ಇನ್ನು ನಾನು ಕೊಡುವ ಯಂತ್ರದ ಉಪಯೋಗವೇನೂ ನಿಮಗಿರದು."



# ಲಾಭದ ವ್ಯವಹಾರ

ಕಾರಂಜಿ ಎಂಬ ಊರಿನಲ್ಲಿ ಸುಬ್ಬಣ್ಣನಿಗೂ, ಕಿಟ್ಟಣ್ಣನಿಗೂ ಒಳ್ಳೆಯ ಸ್ನೇಹವಿತ್ತು. ಇಬ್ಬರೂ ರೈತರೇ. ಒಂದುಸಾರಿ ಕೆರೆಗಟ್ಟೆಯ ಮೇಲೆ ಚಿಕ್ಕದೊಂದು ತಗಾದೆ ಬಂದು ಅವರೊಳಗೆ ಬದ್ಧ ಶತ್ರುತ್ವಕ್ಕೆ ಕಾರಣ ವಾಯಿತು. ಹೇಗಾದರೂ ಕಿಟ್ಟಣ್ಣನನ್ನು ಹೊಡೆದು ಸೊಂಟ ಮುರಿಸಬೇಕೆಂದು ಸುಬ್ಬಣ್ಣ ನಿಶ್ಚಯಿಸಿಕೊಂಡನು.

ಆ ಊರಿನಲ್ಲಿ ರಂಗಣ್ಣನೆಂಬೊಬ್ಬ ಸೊಕ್ಕಿದ ಧಾಂಡಿಗನಿದ್ದ. ಸುಬ್ಬಣ್ಣ ಅವನ ಕೈಗೆ ಇನ್ನೂರು ರೂಪಾಯಿ ಕೊಟ್ಟು, ದಾರಿಯಲ್ಲಿ ಹೊಂಚಿ ಕುಳಿತು ಕಿಟ್ಟಣ್ಣನನ್ನು ಚೆನ್ನಾಗಿ ಹೊಡೆಯಬೇಕೆಂದು ಹೇಳಿದನು. ರಂಗಣ್ಣ ಆಗಲೆಂದು ಒಪ್ಪಿದ.

ಆ ದಿನ ಸಾಯಂಕಾಲ ಸುಬ್ಬಣ್ಣ ನೆರೆಯ ಗ್ರಾಮಕ್ಕೆ ಹೋಗಿ ಹಿಂದಿರುಗಿ ಬರುತ್ತಿದ್ದಾಗ, ದಾರಿ ಕಾದುಕೊಂಡಿದ್ದ ರಂಗಣ್ಣನು ಅವನನ್ನು ಹಿಡಿದು ಕೋಲಿನಿಂದ ನಾಲ್ಕಾರು ಪೆಟ್ಟುಗಳನ್ನು ಕೊಟ್ಟನು. ಸುಬ್ಬಣ್ಣ ನೋವಿನಿಂದ ಕೂಗಾಡುತ್ತ, "ಇದೆಂಥ ಅನ್ಯಾಯವೋ ರಂಗಣ್ಣಾ! ಕಿಟ್ಟಣ್ಣನನ್ನು ಹೊಡೆಯಲು ಇನ್ನೂರು ರೂಪಾಯಿ ಕೊಟ್ಟರೆ ನನ್ನನ್ನು ಹೊಡೆಯುವಿಯಾ ?" ಎಂದನು.

ರಂಗಣ್ಣ ಕಿಟಿಕಿಟಿ ನಕ್ಕು "ನಿಮ್ಮ ವ್ಯವಹಾರ ನನಗೇನೂ ಲಾಭಸಾಟಿಯಿಲ್ಲ. ಕಿಟ್ಟಣ್ಣವರು ಇದಕ್ಕೆ ನಾನ್ನೂರು ಕೊಟ್ಟಿದ್ದಾರೆ. ನಿಮ್ಮ ಇನ್ನೂರು ತೆಗೆದುಕೊಳ್ಳಿ" ಎಂದು ಹಣವನ್ನು ಸುಬ್ಬಣ್ಣನ ಕೈಗೆ ಹಾಕಿ ರಂಗಣ್ಣ ಹೋಗಿಬಿಟ್ಟನು.







# ಬೈಗಳ ಮಹಾತ್ಮೆ

ಒಂದಾನೊಂದು ಊರಿನಲ್ಲಿ ಒಬ್ಬ ಬಡ್ಡೀ ಲೇವಾದೇವಿಯವನಿದ್ದನು. ಈ ಬಡ್ಡೀ ವ್ಯಾಪಾರಿಗೆ ದುಡ್ಡೆಂದರೆ ಪಂಚಪ್ರಾಣ. ಅಂತಲೇ ಮಹಾಪಾಪಿ. ಆದುದರಿಂದ ಅವನ ಕಣ್ಣಿಗೆ ದೇವತೆಗಳ ಬದಲಿಗೆ ಪಿಶಾಚಿಗಳು ಕಾಣುತ್ತಿದ್ದುವು. ಅವನೂ ಅವುಗಳೊಂದಿಗೆ ಮಾತಾಡುವನು, ಕತೆಯಾಡುವನು.

ಒಳ್ಳೆಯವರಾದರೆ ಪಿಶಾಚಿಗಳನ್ನು ನೋಡಿದರೆ ಹೆದರುತ್ತಾರಷ್ಟೆ? ಪಾಪಿಗಳಿಗೆ ಪಿಶಾಚಿಗಳ ಭಯವೇನೂ ಇರುವುದಿಲ್ಲವೆಂಬುದಕ್ಕೆ ಆ ಬಡ್ಡೀ ವ್ಯಾಪಾರಿಯೇ ಉದಾಹರಣೆ.

ಒಂದು ಸಾರಿ ಆ ಗ್ರಾಮದಲ್ಲಿದ್ದ ಬಡ ಹೆಂಗಸೊಬ್ಬಳು ಈ ಬಡ್ಡಿ ವ್ಯಾಪಾರಿಯ ಕೈಯಿಂದ ಸಾಲ ತೆಗೆದುಕೊಂಡಳು. ಅವಳಿಗೆ ಆರು ಮಂದಿ ಮಕ್ಕಳಿದ್ದರು. ಆಕಸ್ಮಾತ್ತಾಗಿ ಅವಳ ಗಂಡ ತೀರಿಹೋಗಿದ್ದನು. ಮಕ್ಕಳಿಗಿಷ್ಟು ಗಂಜಿ ಕಾಯಿಸಲಿಕ್ಕೂ ಗತಿಯಿಲ್ಲದ ಪರಿಸ್ಥಿತಿಯಲ್ಲಿ ಈ ಹೆಂಗುಸು ಎರಡು ವರ್ಷಗಳ ಹಿಂದೆ ಈ ಬಡ್ಡಿ ವ್ಯಾಪಾರಿಯ ಕೈಯಿಂದ ಮೂವತ್ತು ರೂಪಾಯಿ ತೆಗೆದುಕೊಂಡು ತನ್ನ ಮನೆಯನ್ನು ಒತ್ತೆಯಿಟ್ಟಿದ್ದಳು. ಮಾರನೇ ವರ್ಷದಲ್ಲಿ ಕೂಡಾ ಹಳೇ ಸಾಲ ತೀರಿಸುವುದಕ್ಕೆ ಬದಲು ಬೇರೆ ಉಪಾಯವಿಲ್ಲದೆ ಮತ್ತೊಂದು ಹದಿನೈದು ರೂಪಾಯಿ ತೆಗೆದುಕೊಂಡಿದ್ದಳು. ಬಡ್ಡೀ ವ್ಯಾಪಾರಿ ಆ ಬಾಕಿಗಳಿಗೆ ಬಡ್ಡಿಯ ಲೆಕ್ಕ ಕಟ್ಟಿ, ಬಡ್ಡಿಗೆ ಮತ್ತೆ ಬಡ್ಡಿ ಸೇರಿಸಿ, ಎಲ್ಲಾ ನೂರು ರೂಪಾಯಿಗೆ ಲೆಕ್ಕ ಮಾಡಿ ಇಟ್ಟನು.

ಆ ಬಡವಳ ಮನೆ ನೂರು ರೂಪಾಯಿಗಿಂತ ಹೆಚ್ಚೇ ಬೆಲೆಯಾಗುವಂತಿತ್ತು. ಈಗ ಮನೆಯನ್ನು ಖಾಲೀ ಮಾಡಿಸಿ ಸ್ವಾಧೀನಪಡಿಸಿಕೊಳ್ಳೋಣವೆಂದುಕೊಂಡು ಆ ಬಡ್ಡೀ ವ್ಯಾಪಾರಿ ಒಂದು ಒಳ್ಳೆಯ ದಿನ ನೋಡಿ, ಬೆಳಿಗ್ಗೆ ಮನೆಯಿಂದ ಹೊರಟನು.

ಸರಿಯಾಗಿ ಆದೇ ಸಮಯಕ್ಕೆ ಒಂದು ಪಿಶಾಚಿ ಅವನ ಮನೆಯ ಮುಂದಿನಿಂದ ಹೋಗುತ್ತ ಅವನ ಕಣ್ಣಿಗೆ ಬಿತ್ತು.

"ಏನು ಗಿರಾಕಿ ಬಂತೋಯ್ ಪಿಶಾಚೀ! ಇವತ್ತು ಊರಿನಲ್ಲಿ ಯಾರಿಗಾದರೂ ಗಂಡಾಂತರ ಬರುತ್ತೇನು? ಯಾರಿಗಪ್ಪೋ?" ಎಂದ ಬಡ್ಡೀ ವ್ಯಾಪಾರಿ ಅದನ್ನು ನೋಡಿ.

ಪಿಶಾಚಿ ನಕ್ಕು "ಈ ಊರಿಗೆ ಬಂದು ಬಹಳ ಕಾಲವಾಯ್ತು. ಏನಾದರೂ ನುಂಗಲು ಸಿಕ್ಕೀತೇ ಎಂದು ನೋಡಲು ಹೊರಟೆ. ಯಾರನ್ನೆಂಬುದೆಲ್ಲ ಇನ್ನು ಮೇಲೆ ನೋಡಬೇಕು. ನೀನು ಎಲ್ಲೀ ವರೆಗೋ?" ಎಂದು ಕೇಳಿತು ಪಿಶಾಚಿ.

ಒಬ್ಬಳು ದರಿದ್ರುದವಳ ಮನೆಯನ್ನು ಸ್ವಾಧೀನ ಪಡಿಸಿಕೊಳ್ಳಲು ಹೋಗುತ್ತಿದ್ದೇನೆಂದೂ, ಅವಳ ಸಾಲದ ಬಡ್ಡಿ ಎಲ್ಲಾ ಸೇರಿ ಹೀಗೆ ಹೀಗೆ ಆಯಿತೆಂದೂ ಹೇಳಿದ ಬಡ್ಡೀ ವ್ಯಾಪಾರಿ.

"ಅಬ್ಬ! ಎರಡು ವರ್ಷ ಮುಗಿಯುವುದರೊಳಗೆ ಅಸಲಿಗಿಂತ ಬಡ್ಡಿ ಹೆಚ್ಚಾಯ್ತೇ? ನಿಮ್ಮ ಮನುಷ್ಯರು ನಮ್ಮನ್ನು ಬೈಯುತ್ತಾರಾದರೂ, ನಿಮ್ಮಲ್ಲಿ ನಮಗಿಂತ ಹೆಚ್ಚಿನ ಖದೀಮರೇ ಇದ್ದಾರೆ!" ಎಂದಿತು ಪಿಶಾಚಿ.

ಆ ಮಾತು ಕೇಳಿ ಬಡ್ಡೀ ವ್ಯಾಪಾರಿಗೆ ಸಿಟ್ಟು ಬರುವುದಕ್ಕೆ ಬದಲಾಗಿ ಹೆಮ್ಮೆಯೇ ಅನಿಸಿತು. ಹಣ ಹಿಂಡುವುದರಲ್ಲಿ ತಾನು ಎಷ್ಟು ಸಮರ್ಥನೆಂಬುದನ್ನು ಅವನು ಬಲ್ಲನು.

ಹೀಗೆ ಮಾತಾಡುತ್ತಾ ಹೋಗುವಾಗ ಒಂದು ಗುಡಿಸಲಿನೊಳಗಿನಿಂದ ಒಬ್ಬಳು ಹೆಂಗಸು ತನ್ನ ಮಗನ ಮೇಲೆ ರೇಗಿ ಬೀಳುತ್ತ "ಛೀ! ನಿನ್ನ ಪಿಶಾಚಿ ನುಂಗ! ಬಾಗಿಲು ಹಾಕ್ಕೋ ಅಂತ ಎಷ್ಟು ಸಾರಿ ಹೇಳಿದ್ದೇನೆ! ಬೆಕ್ಕು ಅಷ್ಟೂ ಹಾಲು ಕುಡಿದು ಹೋಯ್ತಲ್ಲ!" ಎಂದುದು ಕೇಳಿತು.

"ಅಕೋ ನಿನ್ನ ಆಹಾರ! ಅವಳು ತನ್ನ ಮಗ ನನ್ನೇ ನಿನಗೆ ಕೊಡುತ್ತಾಳೆ" ಎಂದು ಬಡ್ಡೀ ವ್ಯಾಪಾರಿ ಪಿಶಾಚಿಗೆ ಹೇಳಿದ.

ಪಿಶಾಚಿ ನಗುತ್ತ "ಅದು ಅವಳು ಮಾತಿನ ವರಿಸೆಗೆ ಹೇಳಿದ್ದೇ ಹೊರತು ಮನಸ್ಫೂರ್ತಿಯಾಗಿ ನನಗೆ ಮಗನನ್ನು ಕೊಡುವವಳಲ್ಲ. ನನಗೆ ಅಷ್ಟೂ ಅನುಭವವಿಲ್ಲವೆಂದು ಮಾಡಿದೆಯಾ?" ಎಂದಿತು.

ಮತ್ತೆ ಸ್ವಲ್ಪ ದೂರ ಹೋದಾಗ ಒಂದು ಕಡೆ ಯಲ್ಲಿ ಗಂಡ-ಹೆಂಡಿರು ಒಬ್ಬರ ಮೇಲೊಬ್ಬರು ಬೈದಾಡಿಕೊಳ್ಳುತ್ತಿದ್ದರು. "ಪಿಶಾಚಿ ನುಂಗಬೇಕು ನಿನ್ನ" ಎಂದು ಗಂಡನೆಂದರೆ "ನಿಮ್ಮನ್ನು ಮೊದಲು



ನುಂಗಿ ಮತ್ತೆ ನನ್ನ ನುಂಗತ್ತೆ" ಎಂದಳು ಹೆಂಡತಿ. ಅದನ್ನು ಕೇಳಿ ಬಡ್ಡೀ ವ್ಯಾಪಾರಿ ಪಿಶಾಚಿಯನ್ನು ನೋಡಿ, "ಇದು ಇನ್ನೂ ಒಳ್ಳೆಯ ಅವಕಾಶ ! ಒಂದೇ ಬಾಯಿಗೆ ಬೇಕಾದರೆ ಇಬ್ಬರನ್ನೂ ನುಂಗಬಹುದಲ್ಲ !" ಎಂದನು ನಗುತ್ತ.

ಪಿಶಾಚಿ ತಲೆ ಆಡಿಸುತ್ತ. "ಅದೆಲ್ಲ ಬೈಗಳೇ ಹೊರತು ನಿಜವಾದ ಶಾಪನಾರ್ಥಗಳಲ್ಲ. ನಿಜವಾದ ಶಾಪದ ಬೈಗಳು ಹೇಗಿರುತ್ತೇ ಅಂತ ನನಗ್ಗೊತ್ತು ! ಹೋಗೋಣ ನಡೆ" ಎಂದಿತು ಪಿಶಾಚಿ.

ಸ್ವಲ್ಪದೂರ ನಡೆದು ಇಬ್ಬರೂ ಬಡವಳ ಮನೆಯನ್ನು ತಲಪಿದರು. ಬಡ್ಡೀವ್ಯಾಪಾರಿ ಬಾಗಿಲು ತಟ್ಟಿದನು. ಬಡ ಹೆಂಗುಸು ಬಂದು ಬಾಗಿಲು ತೆರೆದು, "ಯಾರಯ್ಯಾ ? ಓ! ನೀವಾ?" ಎಂದು ಮಾತಾಡಿಸಿದಳು.

"ನಾನೇ ಮತ್ತ್ಯಾರಲ್ಲ ಅಕ್ಕಯ್ಯಾ. ನಿನ್ನ ಸಾಲ, ಅಸಲೂ ಬಡ್ಡೀ ಎಲ್ಲಾ ಸೇರಿ ನೂರು ರೂಪಾಯಿ ಭರ್ತಿಯಾಗಿದೆ. ಈ ಮನೆಯನ್ನೇನೋ ನನಗೆ ಒತ್ತೆ ಇಟ್ಟಿದ್ದೀಯಲ್ಲಮ್ಮಾ ? ಎರಡು ವರ್ಷಗಳಲ್ಲಿ ಒಂದು ಚಿಕ್ಕಾಸು ಕೂಡಾ ಕೊಟ್ಟವಳಲ್ಲ. ನೀನು ಮಾತ್ರ ಎಲ್ಲಿಂದ ಕೊಡುತ್ತೀ ಪಾಪ ? ಮನೆಯ ಬೆಲೆಗೂ ಈ ಬಾಕೀಗೂ ಸರಿಹೋಗುತ್ತೆ. ನಿನ್ನ ಸಾಲದ ಹೊರೆಯೂ ತೀರುತ್ತೆ. ಆದ್ದರಿಂದ ಈ ದಿನವೇ ಈ ಮನೆ ಖಾಲೀ ಮಾಡಿ ನನ್ನ ಸ್ವಾಧೀನಕೊಟ್ಟು ಹೋಗಿಬಿಡು. ಒಂದು ದಿನ ತಡ ಮಾಡಿದರೂ ಬಡ್ಡೀ ಲೆಕ್ಕ ಹೆಚ್ಚುತ್ತೆ. ಆದಕ್ಕೇ ಸಮಯಕ್ಕೆ ಬಂದೆ. ಸಾಲದ ಭಾರ ಹೋದರೆ ನಿನಗೆ ಎಲ್ಲಿಯಾದರೂ ಹಾಯಾಗಿರಬಹುದಲ್ಲ !" ಎಂದನು ಬಡ್ಡೀವ್ಯಾಪಾರಿ.

ಕೇಳುತ್ತಾ ಆ ಬಡ ಹೆಂಗುಸಿನಲ್ಲಿ ಕೋಪವು ಭುಗಿಲೆದ್ದಿತು. "ನೀನೊಬ್ಬ ಮನುಷ್ಯನಾ ? ನಿನ್ನನ್ನು ಪಿಶಾಚಿನುಂಗಾ ! ನಲುವತ್ತೈದು ರೂಪಾಯಿ ಕೈಗೆ ಹಾಕಿ ಈ ಐನೂರು ರೂಪಾಯಿ ಮನೆ ಕಿತ್ತುಕೊಳ್ಳುವಿಯಾ ? ನಿನಗೆ ತಕ್ಕ ಪೂಜೆ ಮಾಡ್ತೇನೋ !" ಎನ್ನುತ್ತಾ ಬೇಗಬೇಗ ಒಳಗೆ ಓಡಿದಳು.

ಅವಳು ಮುಖ ತಿರುಗಿಸಿದ ಮರುಕ್ಷಣದಲ್ಲಿ ಪಿಶಾಚಿ ಆ ಬಡ್ಡೀವ್ಯಾಪಾರಿಯನ್ನು ಗುಳುಂಕನೆ ನುಂಗಿ ತನ್ನ ಪಾಡಿಗೆ ಹೋಗಿಬಿಟ್ಟಿತು !

ಬಡ ಹೆಂಗುಸು ಬಡ್ಡೀವ್ಯಾಪಾರಿಯನ್ನು ದೇಹ ಶುದ್ಧಿ ಮಾಡಿ ಕಳುಹಿಸಲು ಕಸಪೊರಕೆಯೊಂದಿಗೆ ಹೊರಗೆಬಂದು ನೋಡಿದಾಗ, ಅಲ್ಲಿ ಯಾರನ್ನೂ ಕಾಣಲಿಲ್ಲ; ಬೀದಿಗಳಲ್ಲಿ ಯಾರೂ ಇರಲಿಲ್ಲ. ಕನಸೇನೋ ಎಂದುಕೊಂಡು ಕಣ್ಣು ತಿಕ್ಕಿ ನೋಡಿದಳು.

"ಅಷ್ಟು ಬೇಗ ಎತ್ತ ಓಡಿದನಪ್ಪಾ !" ಎಂದುಕೊಳ್ಳುತ್ತಾ ಬಡ ಹೆಂಗುಸು ಬಾಗಿಲು ಹಾಕಿಕೊಂಡಳು.






ಬ್ರಹ್ಮದತ್ತನು ಕಾಶೀರಾಜ್ಯವನ್ನು ಪರಿಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಗುತ್ತಿಲನೆಂಬ ಹೆಸರಿನಲ್ಲಿ ಸಂಗೀತಾಭಿಮಾನಿಯಾಗಿ, ವೀಣಾವಾದನದಲ್ಲಿ ಪ್ರಸಿದ್ಧ ವೈಣಿಕನೆಂದು ಖ್ಯಾತಿಗಳಿಸಿದನು. ಹದಿನಾರು ವರ್ಷ ಪ್ರಾಯದಲ್ಲೇ ಗುತ್ತಿಲನಿಗೆ ಸಮಾನನಾದ ವೀಣಾವಾದಕನು ಇಡಿಯ ಜಂಬೂ ದ್ವೀಪದಲ್ಲೇ ಯಾರೂ ಇಲ್ಲವೆಂದು ದಶದಿಶೆಗಳಲ್ಲಿಯೂ ಹೇಳುತ್ತಿದ್ದರು. ಆದುದರಿಂದ ಕಾಶೀರಾಜನು ಗುತ್ತಿಲನನ್ನು ಆಸ್ಥಾನದ ವಿದ್ವಾಂಸನನ್ನಾಗಿ ಮಾಡಿಕೊಂಡು ಗೌರವಿಸಿದನು.

ಹೀಗೆ ಅನೇಕ ವರ್ಷಗಳು ನಡೆದ ಮೇಲೆ ಕಾಶೀ ನಗರದ ದೊಡ್ಡ ವರ್ತಕರು ಕೆಲವರು ವ್ಯಾಪಾರದ ನಿಮಿತ್ತವಾಗಿ ಉಜ್ಜಯಿನೀ ನಗರಕ್ಕೆ ಹೋದರು. ಗುತ್ತಿಲನ ನಾದ ಮಹಿಮೆಯಿಂದ ಕಾಶೀರಾಜ್ಯದ ಪ್ರಜೆಗಳಿಗೆಲ್ಲಾ ವೀಣಾನಾದದ ಮೇಲೆ ಅತ್ಯಂತ ಪ್ರೀತಿಯುಂಟಾಗಿತ್ತು. ಆದುದರಿಂದ ಈ ಕಾಶೀ ವರ್ತಕರಿಗೆ ಕೂಡಾ ವೀಣಾನಾದದ ಮೇಲೆ ಮನಸ್ಸು ಹರಿಯ ತೊಡಗಿತು. ಅವರು ಅಲ್ಲಿಯ ವರ್ತಕರೊಂದಿಗೆ ಮಾತಾಡುತ್ತ, "ನಮಗೆ ಸ್ವಲ್ಪ ವೀಣಾವಾದ್ಯವನ್ನು ಕೇಳಬೇಕೆಂದಿದೆ. ಈ ಉಜ್ಜನಿಯಲ್ಲಿರುವ ವೈಣಿಕರೊಳಗೆ ಉತ್ತಮ ವೀಣಾವಿದ್ವಾಂಸನಿಂದ, ಒಂದು ಸಂಗೀತ ಕಛೇರಿ ನಡೆಸಬೇಕೆಂದಿದೆ. ಆದಕ್ಕೆ ಎಷ್ಟು ಖರ್ಚು ತಾಗಿದರೂ ನಾವೆಲ್ಲರೂ ಕೂಡಿ ಭರಿಸಿಕೊಳ್ಳುತ್ತೇವೆ" ಎಂದರು.

ಉಜ್ಜಯಿನಿಯಲ್ಲಿ ದೊಡ್ಡ ವೈಣಿಕನಾಗಿದ್ದವನು, ಮೂಸಿಲನೆಂಬವನು. ಆದುದರಿಂದ ಕಾಶಿಯವರ್ತಕರ ವಿನೋದ ಕಾಲಹರಣಕ್ಕಾಗಿ ಆತನಿಂದ ಸಂಗೀತ ಕಛೇರಿ ಏರ್ಪಡಿಸಲಾಯಿತು. ಮೂಸಿಲನು ತನ್ನ ಗೋಷ್ಠಿಯೊಂದಿಗೆ, ವೀಣೆಯನ್ನು ತೆಗೆದುಕೊಂಡು ವೇದಿಕೆಯಲ್ಲಿ ಕುಳಿತು ಶ್ರುತಿ ತೆಗೆದು ಬಾರಿಸಲು ತೊಡಗಿದನು. ಅವನು ಎಷ್ಟು ಹೊತ್ತು ಬಾರಿಸಿದರೂ ಕಾಶೀವರ್ತಕರ ಮುಖಗಳಲ್ಲಿ ಯಾವ ಚಲನೆಯೂ ಕಾಣಿಸಲಿಲ್ಲ. ಸ್ವಲ್ಪ ಕೂಡ ಆಹ್ಲಾದವು ಏಳಲಿಲ್ಲ. ಆದನ್ನು ನೋಡಿ ಮೂಸಿಲನು ಮಧ್ಯಮ ಶ್ರುತಿಯನ್ನು ಬಾರಿಸ ತೊಡಗಿದನು. ಆಗಲೂ ವರ್ತಕರಲ್ಲಿ ಚೈತನ್ಯ ವೇಳುವಂತೆ ಕಾಣದೆ ಹೋಯಿತು.

ಆದರಿಂದ ನಿರುತ್ಸಾಹಿಯಾದ ಮೂಸಿಲನು ಕಾಶೀವರ್ತಕರನ್ನು ನೋಡಿ, ". ಅಯ್ಯಾ, ನಾನು



ಇಷ್ಟು ಹೊತ್ತು ವೀಣೆ ಬಾರಿಸುತ್ತಿದ್ದರೂ ತಮಗೆ ಸ್ವಲ್ಪವೂ ಆನಂದವಾಗುವ ಹಾಗೆ ಕಾಣುವುದಿಲ್ಲ. ನನ್ನ ವೀಣಾವಾದನೆಯ ಸಂಗೀತ ನಿಮಗೆ ಹಿಡಿಸ ಲಿಲ್ಲವೆ?" ಎಂದು ಕೇಳಿದನು.

ಕಾಶೀವರ್ತಕರು ಅವನ ಪ್ರಶ್ನೆ ಕೇಳಿ ಏನು ಹೇಳ ಬೇಕೆಂದು ತೋರದೆ ಒಬ್ಬರನ್ನೊಬ್ಬರು ನೋಡಿ ಕೊಂಡರು. ಅವರಲ್ಲೊಬ್ಬನು ಮೂಸಿಲನನ್ನು ನೋಡಿ, "ನೀವು ಇಷ್ಟರವರೆಗೆ ಅಸಲು ಸಂಗೀತ ವನ್ನೇ ಬಾರಿಸಿದಿರೇನು ? ನಮಗೆ ಅದು ಗೊತ್ತಾಗಲೇ ಇಲ್ಲ. ನೀವು ಇನ್ನೂ ವೀಣೆಯ ಶ್ರುತಿ ಸರಿಮಾಡಿ ಕೊಳ್ಳುವುದೆಂದೇ ನಾವು ಅಂದುಕೊಂಡಿದ್ದೆವು" ಎಂದನು.

ಕೂಡಲೇ ಇನ್ನೊಬ್ಬನು, "ವೀಣೆ ಕಟ್ಟಿತೇನೋ, ಸರಿಯಾದ ಶ್ರುತಿಯಲ್ಲಿ ನಿಲ್ಲದೆ ನಿಮ್ಮನ್ನು ಶ್ರಮ ಪಡಿಸುವುದೇನೋ ಅಂದುಕೊಂಡೆವು. ಕ್ಷಮಿಸಿ, ಮತ್ತೇನಿಲ್ಲ" ಎಂದನು.

ಮೂಸಿಲನು ಮುಖಕಂದಿದವನಾಗಿ, "ಹಾಗಾದರೆ ನೀವು ನನಗಿಂತಲೂ ದೊಡ್ಡ ವೈಣಿಕರ ನಾದವನ್ನು ಕೇಳಿರಬೇಕು. ಆದ್ದರಿಂದಲೇ ನನ್ನ ವೀಣಾನಾದ ನಿಮಗೆ ಹಿಡಿಸಲಿಲ್ಲ. ಆ ದೊಡ್ಡ ವೈಣಿಕನು ಯಾರೆಂದು ಹೇಳುವಿರಾ ?" ಎಂದು ಕೇಳಿದನು.

"ನೀವು ನಮ್ಮ ಕಾಶೀನಗರದ ಅಸ್ಥಾನವಿದ್ವಾಂಸ ವೈಣಿಕರಾದ ಗುತ್ತಿಲರ ವೀಣೆಯ ನಾದ ವೈಭವ ವನ್ನು ಕೇಳಿಲ್ಲವೇ ?" ಎಂದು ಕೇಳಿದರು ವರ್ತಕರು.

"ಅವರ ಹೆಸರು ಕೇಳಿದ್ದೇನನ್ನಿ. ನಿಜಕ್ಕೂ ಅವರು ಅಷ್ಟು ದೊಡ್ಡ ವೀಣಾವಾದಕರೆ ?" ಎಂದು ಮೂಸಿಲನು ಕೇಳಿದನು.

"ಅವರ ವೀಣಾನಾದದೊಂದಿಗೆ ಹೋಲಿಸಿದರೆ ನಿಮ್ಮದು ವೀಣೆಯೇ ಅಲ್ಲ!" ಎಂದರು ವರ್ತಕರು.

"ಹಾಗಾದರೆ ಅವರಿಗೆ ಸರಿಸಮಾನನೆನ್ನಿಸಿಕೊಳ್ಳದೆ ನನಗೆ ವಿಶ್ರಾಂತಿ ಇಲ್ಲ. ನನಗೆ ನೀವೇನೂ ಹಣ ಕೊಡಬೇಕಾಗಿಲ್ಲ. ಕೊಟ್ಟರೂ ತೆಗೆದುಕೊಳ್ಳಲಾರೆ" ಎಂದು ಹೇಳಿ ಮೂಸಿಲನು ಅಲ್ಲಿಂದ ಹೊರಟು ಹೋದನು. ಹಾಗು ಆ ದಿನವೇ ಪ್ರಯಾಣ ಮಾಡಿ ಕಾಶಿಯನ್ನು ಸೇರಿ ಬೋಧಿಸತ್ವನ ಮನೆಗೇ ಹೋದನು.

"ಯಾರು ನೀನು ? ಏನಾಗಬೇಕು?" ಎಂದು ಬೋಧಿಸತ್ವನು ಅವನನ್ನು ಆದರಿಸಿ ಕೇಳಿದನು.

"ಅಯ್ಯಾ, ನನ್ನದು ಉಜ್ಜಯಿನಿ. ಮೂಸಿಲ ನೆಂದು ನನ್ನ ಹೆಸರು. ತಮ್ಮ ಬಳಿಯಲ್ಲಿ ವೀಣಾ ವಾದನ ಕಲಿಯ ಬೇಕೆಂದು ಬಂದಿದ್ದೇನೆ. ತಮ್ಮ ಅನುಗ್ರಹದಿಂದ ತಮಗೆ ಸಮಾನನಾಗಬೇಕೆಂದು ನನ್ನ ಉದ್ದೇಶ" ಎಂದನು ಮೂಸಿಲ.

ಬೋಧಿಸತ್ವನು ಅವನಿಗೆ ವೀಣಾವಾದನವನ್ನು ಕಲಿಸಲು ಒಪ್ಪಿಕೊಂಡನು. ಮೂಸಿಲನು ದಿನಾ ಬೋಧಿಸತ್ವನ ಮನೆಗೆ ಹೋಗಿ ವೀಣೆಯ ಅಭ್ಯಾಸಕ್ಕೆ ತೊಡಗಿದನು. ಅವನೊಂದಿಗೆ ರಾಜನ ಸಭೆಗೂ ಹೋಗುತ್ತಿದ್ದನು.

ಅನೇಕ ಸಂವತ್ಸರಗಳು ಕಳೆದುವು. ಒಂದು ದಿನ ಬೋಧಿಸತ್ವನು ತನ್ನ ಶಿಷ್ಯರೊಂದಿಗೆ "ನಿಮ್ಮ ವಿದ್ಯೆ ಪೂರ್ತಿಯಾಯಿತು. ನನಗೆ ತಿಳಿದುದನ್ನೆಲ್ಲಾ ನಿಮಗೆ ಕಲಿಸಿ ಮುಗಿಯಿತು. ಇನ್ನು ನೀವು ನಿಮ್ಮ ನಿಮ್ಮ ಊರುಗಳಿಗೆ ಹೊರಟುಹೋಗಬಹುದು" ಎಂದನು.

ಅದರಂತೆ ಎಲ್ಲಾ ಶಿಷ್ಯರೂ ಹೊರಡುವಾಗ, ಮೂಸಿಲನಿಗೆ ಕಾಶೀರಾಜ್ಯದಲ್ಲೇ ಇರಬೇಕೆಂದಿತ್ತು. ಉಜ್ಜಯಿನಿಯಲ್ಲಿ ತನ್ನ ವಿದ್ಯೆಗೆ ಮಹತ್ವಬಾರದು. ತನಗೆ ವೀಣೆಯನ್ನು ಬಾರಿಸಲು ಸರಿಯಾಗಿ ತಿಳಿಯದೇ ಇದ್ದಾಗಲೇ ತನ್ನನ್ನು ದೊಡ್ಡ ವೈಣಿಕನೆಂದು ಉಜ್ಜಯಿನಿಯವರು ತಿಳಿದಿದ್ದಾರೆ. ವಿದ್ಯೆಯ ಬೆಲೆ ತಿಳಿಯದ ಸ್ಥಳಕ್ಕೆ ಹೋಗುವುದಕ್ಕಿಂತಲೂ ಕಾಶಿಯಲ್ಲಿ ಆಸ್ಥಾನ ವಿದ್ವಾಂಸನೆನಿಸಿಕೊಂಡಿದ್ದರೇನೇ ಕೀರ್ತಿ. ಈಗ ತನಗೆ ಬೋಧಿಸತ್ವನೊಂದಿಗೆ ಸಮಾನವಾದ ವಿದ್ವತ್ತು ಇದೆ. ಬೋಧಿಸತ್ವನು ವೃದ್ಧನಾಗಿದ್ದಾನೆ. ಆದುದರಿಂದ ಕಾಶೀರಾಜನ ಆಸ್ಥಾನದಲ್ಲೇ ಪ್ರವೇಶ ಸಂಪಾದಿಸ ಬೇಕು.

ಹೀಗೆಂದುಕೊಂಡು ಮೂಸಿಲನು ಬೋಧಿಸತ್ವನೊಂದಿಗೆ, "ಅಯ್ಯಾ, ನನಗೆ ಉಜ್ಜಯಿನಿಗೆ ಹೋಗಬೇಕೆಂದಿಲ್ಲ. ನಿಮ್ಮ ಪಾಂಡಿತ್ಯವೆಲ್ಲಾ ನನಗೆ ಬಂದಿತೆಂದು ಹೇಳುವಿರಿ. ಆದುದರಿಂದ ನಿಮ್ಮೊಂದಿಗೆ ನನಗೂ ಸಹಾ ಆಸ್ಥಾನದಲ್ಲಿ ಉದ್ಯೋಗ ಬರುವ ಹಾಗೆ ಮಾಡಿರಿ" ಎಂದನು.

ಮರುದಿನ ಬೋಧಿಸತ್ವನು ರಾಜನೊಂದಿಗೆ ಅವನ ಸಂಗತಿಯನ್ನು ಹೇಳಿ ರಾಜನ ಅಭಿಪ್ರಾಯವನ್ನು ಕೇಳಿದನು.

"ಅವನು ನಿಮ್ಮ ಹತ್ತಿರ ಬಹಳ ವರ್ಷ ಅಭ್ಯಾಸ ಮಾಡಿದ್ದಾನೆ. ಆದುದರಿಂದ ಅವನನ್ನು ಆಸ್ಥಾನ ವಿದ್ವಾಂಸನನ್ನಾಗಿ ಮಾಡುವುದಕ್ಕೆ ಅಡ್ಡಿ ಏನಿಲ್ಲ. ನಿಮಗೆ ಕೊಡುವ ಸಂಬಳದಲ್ಲಿ ಅರ್ಧವನ್ನು



ಅವನಿಗೆ ಕೊಡುತ್ತೇನೆ. ಅವನಿಗೆ ಒಪ್ಪಿಗೆಯಾದ ಪಕ್ಷದಲ್ಲಿ ಪದವಿಯನ್ನು ಸ್ವೀಕರಿಸಬಹುದು" ಎಂದನು ರಾಜ.

ಬೋಧಿಸತ್ವನು ಈ ಮಾತನ್ನು ಮೂಸಿಲನೊಂದಿಗೆ ಹೇಳಿದನು. ಮೂಸಿಲನು ಸಂತೋಷಿಸಲಿಕ್ಕೆ ಬದಲಾಗಿ ತನ್ನೊಳಗೇ ಕೊರಗತೊಡಗಿದನು. ತನ್ನದು ಕಡಿಮೆಯೇನಿದೆ ? ಬೋಧಿಸತ್ವನದು ಹೆಚ್ಚೇನಿದೆ ? ಆತನ ಸಂಬಳದ ಅರ್ಧ ನನಗೆ ಕೊಡುವುದರಲ್ಲಿ ಏನು ಅರ್ಥವಿದೆ ?

ಮೂಸಿಲನು ನೆಟ್ಟಗೆ ರಾಜನ ಬಳಿಗೇ ಹೋಗಿ "ಮಹಾಪ್ರಭೂ ! ನನ್ನನ್ನು ಅರ್ಧ ಸಂಬಳದ ಮೇಲೆ ಆಸ್ಥಾನದ ವೀಣಾ ವಿದ್ವಾಂಸನಾಗಿ ನಿಯಮಿಸುವುದಾಗಿ ಹೇಳಿದಿರಂತೆ. ನನ್ನಲ್ಲಿ ಅಂತಹ ಕಡಿಮೆಯಾದುದೇನೂ ಇಲ್ಲ. ಗುರುಗಳಿಗೆ ಎಷ್ಟು ಗೊತ್ತಿದೆಯೋ ನನಗೂ ಅಷ್ಟೇ ಗೊತ್ತಿದೆ. ಬೇಕಾದರೆ ಗುರುಗಳನ್ನೇ ಕೇಳಿ ನೋಡಿರಿ. ದಯಮಾಡಿ ಅವರಿಗೆ

ಕೊಡುವ ಸಂಬಳವನ್ನೇ ನನಗೂ ನಿರ್ಣಯಿಸಬೇಕೆಂದು ಪ್ರಾರ್ಥನೆ " ಎಂದನು.

ಅವನ ಮಾತು ಕೇಳಿ ರಾಜನಿಗೆ ಕೋಪ ಬಂದಿತು. " ನೀನು ಗುತ್ತಿಲರ ಶಿಷ್ಯನೆಂದು ನಾನು ತಿಳಿದಿದ್ದೇನೆಯೇ ಹೊರತು ಅವರೊಂದಿಗೆ ಸಮಾನನಾದ ವೈಣಿಕನೆಂದು ನನಗೆ ಗೊತ್ತಿರಲಿಲ್ಲ. ಪ್ರತ್ಯಕ್ಷ ನೋಡಿದ ಹೊರತು ಅದನ್ನು ನಂಬಲಾರೆನು " ಎಂದನು ರಾಜ.

" ಬೇಕಾದರೆ ತಾವು ನನ್ನನ್ನು ಪರೀಕ್ಷೆ ಮಾಡಿ ನೋಡಿರಿ ಪ್ರಭೂ " ಎಂದ ಮೂಸಿಲ.

" ಸರಿ, ಸಮಯ ನೋಡಿ ನಿಮಗಿಬ್ಬರಿಗೂ ವೀಣೆಯ ಸ್ಪರ್ಧೆ ಇಡಿಸುತ್ತೇನೆ. ನಿನ್ನ ವಾದನವು ನಿನ್ನ ಗುರುವಿನ ವಾದನಕ್ಕೆ ಸಮಾನವಾಗಿದ್ದರೆ ನಿನಗೆ ಕೂಡಾ ಅವರಿಗೆ ಸಮಾನವಾದ ಸಂಬಳವನ್ನೇ ಕೊಡುತ್ತೇನೆ. ತಪ್ಪಿದ ಪಕ್ಷದಲ್ಲಿ ನಿನ್ನನ್ನು ಆಸ್ಥಾನ ದೊಳಗೆ ಬರಲಿಕ್ಕೆ ಕೂಡಾ ಬಿಡಲಾರೆನು. ಈ ನಿಬಂಧನೆಗೆ ಒಪ್ಪುವೆಯಾ ?" ಎಂದನು ರಾಜ. ಮೂಸಿಲನು ಅದಕ್ಕೆ ಒಪ್ಪಿಕೊಂಡನು.

ಗೊತ್ತು ಮಾಡಿದ ಒಂದು ದಿನದಲ್ಲಿ ಗುರು ಶಿಷ್ಯರಿಬ್ಬರಿಗೂ ವೀಣಾವಾದನ ಸ್ಪರ್ಧೆ ಪ್ರಾರಂಭ ವಾಯಿತು. ಒಬ್ಬರನ್ನು ಮೀರಿಸುವಂತೆ ಇನ್ನೊಬ್ಬರು ವೀಣೆಯನ್ನು ಮೀಟಿಸುತ್ತಿದ್ದರು. ಮಧ್ಯದಲ್ಲಿ ಬೋಧಿಸತ್ವನ ವೀಣೆಯ ತಂತಿಯೊಂದು ಮುರಿ ಯಿತು. ಆದರೆ ಆತನು ಉಳಿದ ತಂತಿಗಳ ಮೇಲೆ ಸ್ವಲ್ಪವೂ ರಾಗ ಭಂಗವಾಗದಂತೆ ಬಾರಿಸಿಕೊಂಡೇ ಇದ್ದನು. ಇದನ್ನು ನೋಡಿ ಮೂಸಿಲನು ತನ್ನ ವೀಣೆಯ ತಂತಿಯೊಂದನ್ನು ಬೇಕೆಂತಲೇ ಮುರಿದು ಬಿಟ್ಟನು. ಅವನೂ ಗುರುವಿನಂತೆಯೇ ಬಾರಿಸು ತ್ತಿರಲು, ಬೋಧಿಸತ್ವನ ಇನ್ನೊಂದು ತಂತಿ ಮುರಿ ಯಿತು. ಮೂಸಿಲನು ಕೂಡಾ ತನ್ನ ವೀಣೆಯ ಮತ್ತೊಂದು ತಂತಿಯನ್ನು ಮುರಿದು ಬಿಟ್ಟನು. ಸ್ವಲ್ಪ ಹೊತ್ತಿಗೆ ಇಬ್ಬರೂ ವೀಣೆಗಳೂ ಸಮಸಮ ವಾಗಿ ಅದ್ಭುತ ನಾದವನ್ನು ಹೊರಡಿಸುತ್ತಿರಲು ಬೋಧಿಸತ್ವನ ವೀಣೆಯ ಎಲ್ಲಾ ತಂತಿಗಳೂ ಮುರಿ ದುವು. ಅದನ್ನರಿತು ಮೂಸಿಲನು ಕೂಡಾ ತನ್ನ ವೀಣೆಯ ಎಲ್ಲಾ ತಂತಿಗಳನ್ನೂ ಮುರಿದುಬಿಟ್ಟನು. ಆದರೆ ಬೋಧಿಸತ್ವನು ಮುರಿದು ಹೋದ ತಂತಿ ಗಳನ್ನೇ ಎಳೆದೆಳೆದು ಸ್ವರಗಳನ್ನು ಭಂಗವಿಲ್ಲದಂತೆ ಬಾರಿಸಿಕೊಂಡೇ ಇದ್ದನು. ಮೂಸಿಲನಿಗೆ ಹಾಗೆ ಮಾಡಲು ಸಾಧ್ಯವಾಗದೆ ಕಕ್ಕಾಬಿಕ್ಕಿಯಾದನು. ಅವನ ಮೋರೆ ಬೆವತಿತು. ಸಭೆಯವರೆಲ್ಲಾ ಬೋಧಿಸತ್ವನ ಮಹಾಪ್ರತಿಭೆಗೆ ಹರ್ಷಧ್ವನಿ ಮಾಡಿ, ಮೂಸಿಲನಿಗೆ ಗೇಲಿಮಾಡಿದರು. ಮೂಸಿಲನು ಈ ಅವಮಾನವನ್ನು ತಾಳಲಾಗದೆ ಸಭೆಯಿಂದ ಹೊರಟುಹೋಗಿ, ನೆಟ್ಟಗೆ ಉಜ್ಜಯಿನಿಗೇ ಪ್ರಯಾಣ ಮಾಡಿದನು.





# ಸುಲ್ತಾನಾ ರಜಿಯಾ

ಟರ್ಕೀದೇಶದ ಒಂದು ಬೆಟ್ಟದ ಕಣಿವೆಯಲ್ಲಿ ಕೆಲವು ಯುವಕರು ಆಟ ಆಡಿಕೊಂಡಿದ್ದರು. ಅವರಲ್ಲಿ ಒಬ್ಬನು ಉಳಿದವರಿಗಿಂತ ಬಹಳ ಚಿಕ್ಕವನು. ಆ ಸಮಯದಲ್ಲಿ ವರ್ತಕರ ವಲಸೆಯ ತುಕಡಿಯೊಂದು ಆ ಪ್ರದೇಶಕ್ಕೆ ಬಂತು. ದೊಡ್ಡ ಹುಡುಗರು ಆ ಚಿಕ್ಕ ಹುಡುಗನನ್ನು ಹಿಡಿದು ಎಳೆದೊಯ್ದು ಆ ವರ್ತಕರಲ್ಲಿ ಒಬ್ಬನಿಗೆ ಮಾರಿಬಿಟ್ಟರು.

ಸ್ವಲ್ಪ ಕಾಲ ಕಳೆದ ಮೇಲೆ ಆ ಗುಲಾಮ ಹುಡುಗನ ಕಷ್ಟಗಳಿಗೆ ಕನಿಕರಗೊಂಡವನೊಬ್ಬ ತಾನೇ ಅವನನ್ನು ಕೊಂಡುಕೊಂಡನು. ಈ ಕೊಂಡುಕೊಂಡವನು, ಘೋರೀ ಮಹಮ್ಮದನ ಪ್ರಧಾನ ಗುಲಾಮ. ಘೋರಿಯ ಮರಣಾನಂತರ ಅವನೇ ದಿಲ್ಲಿಯ ಪಾಲಕನಾಗಿ ಪಟ್ಟವೇರಿದನು. ಕುತುಬುದ್ದೀನ್ ಐಬಕ್ ಹೆಸರಿನಿಂದ ಅವನು ಪ್ರಸಿದ್ಧನಾದನು.






ಹೀಗೆ ಎರಡು ಸಾರಿ ಗುಲಾಮನಾಗಿ ಮಾರಲ್ಪಟ್ಟ ಹುಡುಗನ ಹೆಸರು ಇಲ್ಟಮಿಷ್. ಅವನನ್ನು ಗುಲಾಮರ ಗುಲಾಮ ಎನ್ನುತ್ತಿದ್ದರು. ಒಂದು ಸಾರಿ ಅವನು ತನ್ನ ಯಜಮಾನನನ್ನು ಕೊಲೆಯ ಗಂಡದಿಂದ ತಪ್ಪಿಸಿದನು. ಈ ಕಾರಣದಿಂದ ಇಲ್ಟಮಿಷನ ಮೇಲೆ ಐಬಕನಿಗೆ ತುಂಬಾ ವಾತ್ಸಲ್ಯವಾಯಿತು. ಕೆಲವು ವರ್ಷಗಳ ಮೇಲೆ ಇಲ್ಟಮಿಷ್, ಕುತುಬುದ್ದೀನ್ ಐಬಕನ ಕುಮಾರಿಯನ್ನು ವಿವಾಹವಾದನು.



ಐಬಕನ ಮರಣಾನಂತರ ರಾಜ್ಯವು ಅರಾಜಕ ವಾಯಿತು. ಇಲ್ಟುಮಿಷ್ ಸಿಂಹಾಸನವನ್ನು ಆಕ್ರ ಮಿಸಿಕೊಂಡು, ತನಗೆ ಇದಿರು ತಿರುಗಿದ ಗಜನೀ ಪಾಲಕನಾದ ತಾಜುದ್ದೀನನನ್ನೂ, ಕೆಲವಂದಿ ಅಮೀರರನ್ನೂ ಸೋಲಿಸಿಬಿಟ್ಟನು. ಈ ವಿಧವಾಗಿ ಅವನು ಬಂಡಾಯವೆದ್ದವರನ್ನು ಅಡಗಿಸಿ, ತನ್ನ ಅಧಿಕಾರವನ್ನು ಸುಸ್ಥಿರ ಗೊಳಿಸಿಕೊಂಡನು.

ಕ್ರಿ. ಶ. ೧೨೩೨ ರ ಕಾಲದಲ್ಲಿ ಇಲ್ಟುಮಿಷ್‌ನು ಕುತುಬ್‌ಮಿನಾರ್ ನಿರ್ಮಾಣವನ್ನು ಪೂರ್ತಿ ಗೊಳಿಸಿದನು. ಇದು ನೋಡುವವರನ್ನು ಬೆರಗು ಗೊಳಿಸುವಂತಹ ಗೋಪುರದಂತೆ ಎತ್ತರವಾದ ಕಟ್ಟಡ. ಮುಸ್ಲಿಂ ಮತಗುರುವಾದ ಖ್ವಾಜಾ ಕುತುಬುದ್ದೀನನ ಸಮಾಧಿಯ ಮೇಲೆ ಇದರ ನಿರ್ಮಾಣ ಜರುಗಿತೆಂದು ಹೇಳುವರು.





ತನ್ನ ಮರಣದ ಸಮಯದಲ್ಲಿ ಇಲ್ಟುಮಿಷ್ ಯಾರೂ ಊಹಿಸದ ವಿಧದಲ್ಲಿ ತನ್ನ ಕುಮಾರರಿಗೆ ಬದಲಾಗಿ ಕುಮಾರಿ ರಜಿಯಾಳೇ ಪರಿಪಾಲಕ ಳಾಗಿರಬೇಕೆಂದು ಪ್ರಕಟಿಸಿದನು. ಅವನ ಕುಮಾರರು ನಿರುಪಯೋಗಿಗಳು. ರಜಿಯಾ ಕ್ರಮ ಶಿಕ್ಷಣ ಪಡೆದವಳು. ವಿವೇಕವತಿಯೂ ಹೌದು.

ಇಲ್ಟುಮಿಷ್‌ನ ನಿರ್ಣಯವು ಆ ಕಾಲದ ಸಾಮಾಜಿಕ ಪರಿಸ್ಥಿತಿಗಳಿಗೆ ಅನುಗುಣವಾದುದಲ್ಲ. ಅಮೀರರೂ ಇತರ ಮುಖ್ಯಸ್ಥರೂ ಸ್ತ್ರೀಯನ್ನು ಪರಿಪಾಲಕಳೆಂದು ಅಂಗೀಕರಿಸುವ ಸ್ಥಿತಿಯಲ್ಲಿರಲಿಲ್ಲ. ಇಲ್ಟುಮಿಷ್‌ನು ಸತ್ತಕೂಡಲೇ ಅವರು ರಜಿಯಾಳನ್ನು ಪದವಿಯಿಂದ ತೊಲಗಿಸಿಬಿಟ್ಟರು.





ಅವರ ದೃಷ್ಟಿ ರಜಿಯಾಳ ಸವತಿ ತಮ್ಮನಾದ ರುಕ್ನುದ್ದೀನನ ಮೇಲೆ ಬಿದ್ದಿತ್ತು. ಅವನನ್ನು ದಿಲ್ಲಿಯ ಸುಲ್ತಾನನಾಗಿ ಗದ್ದುಗೆಗೇರಿಸಿದರು. ಇವನು ಅವಿವೇಕಿ. ಸ್ವೇಚ್ಛಾಚಾರಿ. ತಾನು ಸುಲ್ತಾನನಾದೆನೆಂಬ ಉತ್ಸಾಹದಲ್ಲಿ, ದಿಲ್ಲಿಯ ಬೀದಿಗಳಲ್ಲಿ ಆನೆಯ ಮೇಲೆ ಮೆರವಣಿಗೆ ಹೋಗುತ್ತ, ಪ್ರಜೆಗಳ ಮೇಲೆ ಮುಷ್ಟಿ ಮುಷ್ಟಿಯಾಗಿ ಬೆಳ್ಳಿ, ಬಂಗಾರಗಳ ನಾಣ್ಯಗಳನ್ನು ಉದ್ದಕ್ಕೂ ಚೆಲ್ಲಿದನು.

ರುಕ್ನುದ್ದೀನನ ತಾಯಿಯಾದ ಷಾತುರ್ಕಾನ್ ಇಲ್ಟುಮಿಷ್‌ನ ಹೆಂಡತಿಯರಲ್ಲಿ ಒಬ್ಬಳು. ಅವಳು ಬಹಳ ಕ್ರೂರಳು. ಮಗನು ಆಟಪಾಟಗಳಲ್ಲಿ ಮುಳುಗಿ ತೇಲುವಾಗ, ಅವಳು ಅಧಿಕಾರವನ್ನು ತನ್ನ ಹಸ್ತಗತಮಾಡಿಕೊಂಡು ಇಲ್ಟುಮಿಷ್‌ನ ಹೆಂಡತಿಯರಲ್ಲಿ ಕೆಲವರನ್ನು ಕೊಲ್ಲಿಸಿ, ಉಳಿದವರನ್ನು ಸೆರೆಯಲ್ಲಿಡಿಸಿದಳು.





ಈ ಷಾತುರ್ಕಾನಳು ರಾಜವಂಶದ ಸಮರ್ಥನೂ ಬುದ್ಧಿವಂತನೂ ಆದ ಸವತಿಯ ಒಬ್ಬನೇ ಮಗನನ್ನು ಕಣ್ಣು ಕೀಳಿಸಿ ಆ ಮೇಲೆ ಕೊಲ್ಲಿಸಿದಳು. ರಜಿಯಾಳನ್ನು ಕೊಲ್ಲಿಸಲಿಕ್ಕೂ ಯೋಜನೆ ಹಾಕಿದಳು. ಈ ಸಂಗತಿಯನ್ನು ತಿಳಿದು ಕೂಡಾ ಏನು ಮಾಡಲಿಕ್ಕೂ ರಜಿಯಾಳಿಗೆ ಸಾಧ್ಯವಾಗಲಿಲ್ಲ.

ಷಾತುರ್ಕಾನ್, ರುಕ್ನುದ್ದೀನರ ದುಶ್ಕಾರ್ಯಗಳಿಂದ ಪ್ರಜೆಗಳಲ್ಲಿ ಅತೃಪ್ತಿ ದೊಡ್ಡದಾಗಿ ಕೆರಳಿಕೊಂಡಿತು. ಅವರಿಬ್ಬರನ್ನು ಬಲಪಡಿಸುವ ಸರದಾರರು ಕೂಡಾ ಪ್ರಜೆಗಳ ಆಗ್ರಹಾವೇಶಕ್ಕೆ ಹೆದರಿ ಬದಿಗೆ ತಪ್ಪಿಸಿಕೊಂಡರು. ಷಾತುರ್ಕಾನ್ ಸೆರೆ ಮನೆಯನ್ನು ಸೇರಬೇಕಾಯಿತು. ಅವಳ ಮಗನು ಸಿಂಹಾಸನದಿಂದ ಚ್ಯುತನಾಗಿ, ಕಡೆಗೆ ಕೊಲೆಯಿಂದ ತೀರಿದನು.





ಈ ಅರಾಜಕ ಪರಿಸ್ಥಿತಿಯಲ್ಲಿ ರಜಿಯಾ ಒಬ್ಬಳ ಹೊರತು, ಪ್ರಜೆಗಳನ್ನು ಸಂತೃಪ್ತಿ ಪಡಿಸಬಲ್ಲವರು ಬೇರೆ ಯಾರೂ ಇರಲಿಲ್ಲ. ಅವಳ ತಂದೆಯ ವೀಲುನಾಮೆಯ ಸಂಗತಿ ಪ್ರಜೆಗಳಿಗೆ ಗೊತ್ತಿತ್ತು. ಪ್ರಜೆಗಳು ರಜಿಯಾಳನ್ನೇ ಸಿಂಹಾಸನವೇರಬೇಕೆಂದು ಕೇಳಿಕೊಂಡರು. ಈ ಪರಿಸ್ಥಿತಿಯಲ್ಲಿ ಅಮೀರರೂ, ಇತರ ಮುಖ್ಯಸ್ಥರೂ ಅವಳನ್ನು ಬಲಪಡಿಸಲೇ ಬೇಕಾಯಿತು. ಹೀಗೆ ಅವಳು ಸುಲ್ತಾನಾ ರಜಿಯಾ ಎಂದು ಧಿಲ್ಲಿಯ ಪರಿಪಾಲಕಳಾಗಿ ಸಿಂಹಾಸನವೇರಿದಳು.



# ಕಾರ್ಯಸಾಧಕ

ತಾಮ್ರಪರ್ಣಿ ಪ್ರಸಿದ್ಧ ರೇವಾಗಿದ್ದಾಗ, ಆ ರೇವು ಪಟ್ಟಣದಲ್ಲಿ ರಾಮಗುಪ್ತನೆಂಬ ವರ್ತಕನಿದ್ದನು. ಅವನು ನ್ಯಾಯವೂ ಧರ್ಮವೂ ತಪ್ಪದಂತೆ ಬಹಳ ಎಚ್ಚರಿಕೆಯಿಂದ ವ್ಯಾಪಾರ ಕಾರ್ಯ ಸಾಗಿಸುತ್ತ ಬಹಳ ಧನವನ್ನು ಗಳಿಸಿದ್ದನು. ಅವನ ಕುಮಾರರಾದ ಮುರಹರಿಯೂ, ವೀರಹರಿಯೂ, ಪ್ರಾಯಕ್ಕೆ ಬಂದ ಮೇಲೆ, ರಾಮಗುಪ್ತನಿಗೆ ಸಮುದ್ರ ವರ್ತಕವನ್ನು ಪ್ರಾರಂಭಿಸಬೇಕೆಂದು ಕೋರಿಕೆಯುಂಟಾಯಿತು. ಅವನಂತಹ ಕೆಲಮಂದಿ ವರ್ತಕರು ಆಗಾಗ ಹಡಗಿನಲ್ಲಿ ಪೂರ್ವ ದ್ವೀಪಗಳಿಗೆ ಹೋಗಿ, ಅಲ್ಲಿ ಸರಕುಗಳನ್ನು ಮಾರಿ ಬಹಳ ಲಾಭಗಳಿಸಿ ಹಿಂದಿರುಗುವುದನ್ನು ಅವನು ನೋಡುತ್ತಿದ್ದನು.

ಸಮುದ್ರದಲ್ಲಿ ಹಡಗಿನಲ್ಲಿ ಮಾಡುವ ವಾಣಿಜ್ಯವು ಬಹಳ ಶ್ರಮದಿಂದ ಕೂಡಿದುದು. ಆದುದರಿಂದ ರಾಮಗುಪ್ತನು ತನ್ನ ಕುಮಾರರಲ್ಲಿ ಒಬ್ಬನನು ಆ ಬಗೆಯ ವರ್ತಕಕ್ಕೆ ತೊಡಗಿಸಬೇಕೆಂದು ಮಾಡಿದನು.

ಆದರೆ ಇಬ್ಬರು ಕುಮಾರರೂ ಹೊಸ ಹೊಸ ಪ್ರದೇಶಗಳನ್ನು ನೋಡಬಹುದೆಂಬ ಉತ್ಸಾಹದಿಂದ ಅದಕ್ಕೆ ಹೊರಡಲು ನಾನು ತಾನೆಂದು ಮುಂದೆ ಬಂದರು. ರಾಮಗುಪ್ತನು ಈ ಸಮಸ್ಯೆಯನ್ನು ಹೇಗೆ ಪರಿಷ್ಕರಿಸುವುದೆಂದು ಯೋಚಿಸಿ, ಒಂದು ಉಪಾಯವನ್ನು ಹುಡುಕಿಕೊಂಡನು.

ಕೆಲವು ದಿನಗಳ ಮೇಲೆ ರಾಮಗುಪ್ತನು ಇಬ್ಬರು ಕುಮಾರರನ್ನೂ ಕರೆದು, "ಹಡಗಿನಲ್ಲಿ ಪ್ರಯಾಣ ಹೊರಡಲು ಇನ್ನೂ ಬಹಳ ದಿನಗಳಿವೆ. ಅಷ್ಟರೊಳಗೆ ಇಲ್ಲಿಯ ಕಾಡುದಾರಿಯಲ್ಲಿರುವ ದೇವಾಲಯದ ಪ್ರದೇಶಕ್ಕೆ ಪಕ್ಕದಲ್ಲಿ ಒಂದು ಛತ್ರವನ್ನು ಕಟ್ಟಿಸಬೇಕೆಂದಿದ್ದೇನೆಂದು ಈ ಮೊದಲು ಹೇಳಿದ್ದೇನಷ್ಟೆ ? ಅದಕ್ಕಾಗಿ ಪ್ರತ್ಯೇಕಿಸಿದ ಧನದಲ್ಲಿ ಆ ಛತ್ರದ ಕೆಲಸವನ್ನು, ನಿಮ್ಮಲ್ಲಿ ಯಾರು ಸರಿಯಾಗಿ ಮಾಡಿ ಮುಗಿಸುವಿರೋ ಅವರನ್ನೇ ನೌಕಾವಾಣಿಜ್ಯಕ್ಕೆ ಕಳುಹಿಸುತ್ತೇನೆ " ಎಂದನು.

ಆಮೇಲೆ ಚೀಟು ಹೊರಳಿಸಿ ಹಾಕಿ ನೋಡಿದಾಗ ಆ ಛತ್ರದ ಬಾಧ್ಯತೆ ಮುರಹರಿಯ ಕಡೆಗೆ ಬಂದಿತು. ಮುರಹರಿ ಛತ್ರಕಟ್ಟಿಸುವ ಕಾರ್ಯಕ್ಕೆ ಹೊರಟನು. ಮೇಸ್ತ್ರಿಯನ್ನು ಗೊತ್ತು ಮಾಡಿ, ಕಲ್ಲು ಸುಣ್ಣ, ಮೊದಲಾದುವನ್ನೆಲ್ಲಾ ತರಿಸಿದನು. ಅಲ್ಲಿದ್ದ ಮರ

ಸಿ. ರಾಜೇಶ್ವರರಾವು



ಮಟ್ಟು ಪೊದೆ ಬಳ್ಳಿಗಳನ್ನೆಲ್ಲಾ ಕಡಿದು, ನೆಲಮಟ್ಟ ಮಾಡಿದ ಮೇಲೆ, ಮಣ್ಣು ಹೊರಲಿಕ್ಕೆ ಕೂಲೀ ಜನರ ಅಗತ್ಯ ಬಿದ್ದಿತು. ಅದಕ್ಕಾಗಿ ಪಟ್ಟಣದ ಕಡೆಯಿಂದ ಕೂಲಿಯಾಳುಗಳನ್ನು ತರಿಸುವುದೆಂದರೆ ಬಹಳ ಖರ್ಚಿನ ಕೆಲಸ. ಆದುದರಿಂದ ಸಮೀಪದಲ್ಲಿದ್ದ ಬೇಡರ ಕೇರಿಯಿಂದ ಕೂಲಿಯಾಳುಗಳಿಗಾಗಿ ಪ್ರಯತ್ನ ಮಾಡಿದನು ಮುರಹರಿ. ಅವರಾರೂ ಬರಲಾರೆವೆಂದು ಹೇಳಿಬಿಟ್ಟರು.

ಏನು ಮಾಡುವುದೆಂದು ಮುರಹರಿ ಆಲೋಚನೆಗೆ ಬಿದ್ದನು. ಅವನು ಛತ್ರದ ಪ್ರದೇಶಕ್ಕೆ ಹಿಂದಿರುಗುವ ಸಮಯದಲ್ಲಿ ಕುಶಾಲನೆಂಬ ಬೇಡರವನೊಬ್ಬನು ಅವನ ಬಳಿಗೆ ಬಂದು, "ಅಯ್ಯಾ, ತಮಗೆ ಕಟ್ಟೋಣವಾಗಿಯುವವರೆಗೆ ಕೂಲಿಯ ಕೆಲಸಕ್ಕೆ ಆಳುಗಳು ಬೇಕಾದರೆ ನಾನು ಕರೆದುಕೊಂಡು ಬರುತ್ತೇನೆ. ನನಗೊಂದು ಸಂಬಳ ನಿಶ್ಚಮಾಡಿರಿ. ನನ್ನ ಕೇರಿಯಲ್ಲಿ ಅನೇಕರಿದ್ದಾರೆ" ಎಂದನು.

ಮುರಹರಿ ಸ್ವಲ್ಪ ಆಶ್ಚರ್ಯಪಟ್ಟು, "ನೂರು ಮಂದಿ ಕೂಲಿಯಾಳುಗಳನ್ನು ತರಬಲ್ಲೆಯಾ ?" ಎಂದು ಕೇಳಿದನು. ಕುಶಾಲನು ತರುವೆನೆಂದು ಹೇಳಿ, ಮರುದಿನ ಹಾಗೆಯೇ ಕರೆದುಕೊಂಡು ಬಂದನು. ಅವನಿಗೆ ಇಪ್ಪತ್ತು ವರಹ ಸಂಬಳವೆಂದು ನಿಶ್ಚಯಿಸಲ್ಪಟ್ಟಿತು. ಛತ್ರದ ಕಟ್ಟೋಣದ ಕೆಲಸವು ಚುರುಕಾಗಿ ಸಾಗತೊಡಗಿತು.

ಒಂದು ದಿನ ರಾಮಗುಪ್ತನು ಛತ್ರದ ಕೆಲಸ ಎಲ್ಲಿಯ ವರೆಗೆ ಬಂತೆಂದು ತಿಳಿದುಕೊಳ್ಳಲು ಛತ್ರದ ಕಟ್ಟೋಣ ನಡೆಯುವ ಕೆಲಸದ ಸ್ಥಳಕ್ಕೆ ಬಂದನು. ಎಲ್ಲವನ್ನೂ ನೋಡಿ ಆಗುಹೋಗುಗಳನ್ನು ಕುರಿತು ವಿಚಾರಿಸಿದನು.

ಆ ಸಮಯದಲ್ಲಿ ಕುಶಾಲನು ಒಂದು ಮರದ ನೆರಳಿನಲ್ಲಿ ನಿಂತುಕೊಂಡು ಯಾರೊಂದಿಗೋ ಲೋಕಾಭಿರಾಮವಾಗಿ ಮಾತಾಡಿಕೊಂಡಿದ್ದನು. ರಾಮಗುಪ್ತನು ಮಗನ ಮೂಲಕ ಕುಶಾಲನಿಗೆ ಮುಟ್ಟುವ ಸಂಬಳದ ಸಂಖ್ಯೆಯನ್ನು ತಿಳಿದು, "ನೆರಳಿನಲ್ಲಿ ಹರಟೆ ಹೊಡೆದುಕೊಂಡು ಕಾಲಹರಣ ಮಾಡುವವನಿಗೆ ಅಷ್ಟು ಸಂಬಳವೇತಕ್ಕೆ ? ತಿಂಗಳಿಗೆ ಹತ್ತು ವರಹಾ ಕೊಟ್ಟರೆ ಅವನ ಕೆಲಸಕ್ಕೆ ಸಾಕು. ಸರಿ ಹೋಗುತ್ತದೆ" ಎಂದನು.

ಆ ದಿನ ಸಾಯಂಕಾಲ ತಂದೆ ಹೊರಟು ಹೋದ ಮೇಲೆ, ಮುರಹರಿ ಕುಶಾಲನನ್ನು ಕರೆದು, "ಇದು ನನ್ನ ತಂದೆಯವರ ಆಜ್ಞೆ. ಇನ್ನು ಮೇಲೆ ನಿನಗೆ ತಿಂಗಳಿಗೆ ಸಂಬಳ ಹತ್ತು ವರಹ" ಎಂದು ಹೇಳಿದನು.

ಏನೂ ಹೇಳದೆ ಕುಶಾಲನು ಹೊರಟುಹೋದನು. ಮರುದಿನ ಯಾವ ಕೂಲಿಯಾಳುಗಳೂ ಬರಲಿಲ್ಲ. ಮುರಹರಿ ತಾನೇ ಬೇಡರ ಕೇರಿಗೆ ಹೋಗಿ ಆಳುಗಳನ್ನು ಕೇಳಿ ನೋಡಿದನು. ಅವರೆಲ್ಲ ಕೆಲಸಕ್ಕೆ ಬರಲಾರೆವೆಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಟ್ಟರು.

ಛತ್ರ ಕಟ್ಟುವ ಮೇಸ್ತ್ರಿಗಳು, ಮಳೆಗಾಲವು ಬೇಗದಲ್ಲೇ ಬರಲಿದೆಯೆಂದೂ, ಅಷ್ಟರೊಳಗೆ ಕೆಲಸ ಮುಗಿಸದೆ ಹೋದರೆ ಬಹಳ ನಷ್ಟಪಡಬೇಕಾಗಿ ಬರುತ್ತದೆಂದೂ ಕಳವಳಪಡಿಸುವಂತೆ ಹೇಳಿದರು.

ಅದನ್ನು ಕೇಳಿ ಮುರಹರಿ ಮತ್ತೊಂದು ಸಾರಿ ಬೇಡರ ಕೇರಿಗೆ ಹೋಗಿ ಕುಶಾಲನು ಕೇಳಿದ ಹಳೆಯ ಲೆಕ್ಕದಲ್ಲೇ ಸಂಬಳ ಕೊಡುವುದಾಗಿ ಹೇಳಿದನು. ಮರುದಿನದಿಂದ ಕೂಲಿಯಾಳುಗಳೆಲ್ಲಾ ಕೆಲಸಕ್ಕೆ ಬರ ತೊಡಗಿದರು.

ಎರಡು ವಾರಗಳ ಮೇಲೆ ರಾಮಗುಪ್ತನು ಮತ್ತೊಂದು ಸಾರಿ ಛತ್ರದ ಕೆಲಸ ನೋಡಲು ಬಂದನು. ಮುರಹರಿ ತಂದೆಯೊಂದಿಗೆ ನಡೆದ ಸಮಾಚಾರವನ್ನೆಲ್ಲಾ ಹೇಳಿದನು. ಅದನ್ನು ಕೇಳಿ ರಾಮಗುಪ್ತನು ರೇಗಿಕೊಂಡು, "ಹೀಗಾದರೆ ಖರ್ಚು ಎರಡು ಪಾಲು ಆಗುತ್ತದಲ್ಲೋ ! ಹಾಗಾದರೆ ನಿನ್ನಿಂದ ನಿರ್ವಹಣೆ ಸಾಧ್ಯವಿಲ್ಲವೆಂದೇ ಆಯಿತು" ಎಂದು ಜರೆದಾಡಿ ಹೊರಟುಹೋದನು.

ಆಮೇಲೆ ಮುರಹರಿ ತನ್ನಲ್ಲಿ ಏನೋ ಲೋಪವಿದೆಯೆಂದುಕೊಂಡು, ಅದೇನೆಂದು ತಿಳಿಯದಿದ್ದರೂ ಕುಶಾಲನನ್ನು ಕರೆದು, ಅವನ ಸಂಬಳ ಹತ್ತು ವರಹಗಳಿಗಿಂತ ಹೆಚ್ಚು ಕೊಡಲು ಸಾಧ್ಯವಿಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟನು.

ಮಾರನೇ ದಿನ ಕೆಲಸಕ್ಕೆ ಯಾರೂ ಬಾರದಾದರು. ಮೇಸ್ತ್ರಿಗಳು ಉತ್ಸಾಹಗೆಟ್ಟು ಏನೇನೋ ಹೇಳ ತೊಡಗಿದರು. ಮುರಹರಿಯ ಸ್ಥಿತಿ ಅಡಕತ್ತರಿಗೆ ಸಿಕ್ಕಿಕೊಂಡಂತಾಯಿತು. ಅವನು ಬೇಸತ್ತುಕೊಂಡು ಮನೆಗೆ ಹೋಗಿ ಛತ್ರ ಕಟ್ಟಿಸುವ ಕೆಲಸ ತನ್ನಿಂದ ಸಾಧ್ಯವಾಗುವಂತಹುದಲ್ಲವೆಂದು ತಂದೆಯೊಂದಿಗೆ ಹೇಳಿಬಿಟ್ಟನು. ರಾಮಗುಪ್ತನು ಎರಡನೇ ಮಗನಾದ ನರಹರಿಯನ್ನು ಆ ಕೆಲಸಕ್ಕೆ ಕಳುಹಿಸಿದನು.

ನರಹರಿ ಕಟ್ಟೋಣದ ಹತ್ತಿರ ಬಂದು, ಬೇಡರ ಕೇರಿಯ ಕುಶಾಲನನ್ನು ಕರೆದು, "ನೋಡಪ್ಪಾ, ನಿನಗೆ ತಿಂಗಳಿಗೆ ಹತ್ತು ವರಹಗಳಿಗಿಂತ ಹೆಚ್ಚಿಗೆ ಸಂಬಳ ಕೊಡಲು ಸಾಧ್ಯವಿಲ್ಲ. ಇದು ತಂದೆಯವರ



ಅಪ್ಪಣೆ. ಇನ್ನು ನೀನು ಆಳುಗಳ ಮೇಲೆ ನಿಗಾ ಇಟ್ಟು ಚೆನ್ನಾಗಿ ಕೆಲಸ ಮಾಡಿಸುವವನಾದುದರಿಂದ ನಿನಗೆ ದಿನಕ್ಕೆ ಮೂರು ವರಹಗಳ ಭತ್ತೆ ಪ್ರತ್ಯೇಕ ವಾಗಿ ಕೊಡುತ್ತೇನೆ. ಇಷ್ಟವಿದ್ದರೆ ನಿನ್ನ ಆಳುಗಳ ನ್ನೆಲ್ಲಾ ಕೆಲಸಕ್ಕೆ ಬರಲು ಹೇಳು. ಇಲ್ಲದಿದ್ದರೆ ನಾಳೆ ಇಷ್ಟು ಹೊತ್ತಿಗೆ ಪಟ್ಟಣದಿಂದ ಆಳುಗಳನ್ನು ಕರೆದು ಕೊಂಡು ಬರುತ್ತೇನೆ. ಹಾಗೆ ಬಂದರೆ ಈ ಛತ್ರದ ಉಪಯೋಗದ ಮುಖ್ಯ ಭಾಗ ನಿಮಗೆ ಸಿಗಲಾರದು. ಬೇಗ ನಿರ್ಧರಿಸಿ ಹೇಳಿಬಿಡು. ಹತ್ತಿರದವರನ್ನು ಬಿಡಬಾರದೆಂತಲೇ ನಾನು ಮತ್ತೆ ನಿನ್ನನ್ನು ಕರೆದು ಹೇಳುವುದು " ಎಂದನು.

ಕುಶಾಲನು ಒಂದು ನಿಮಿಷ ಮನಸ್ಸಿನೊಳಗೇ ಲೆಕ್ಕ ಹಾಕಿ ನೋಡಿಕೊಂಡು " ಹಾಗೇ ಆಗಲಿ. ಎಲ್ಲಾ ನಿಮ್ಮ ದಯೆ " ಎಂದನು.

ಛತ್ರ ಕಟ್ಟುವ ಕೆಲಸ ಪೂರ್ತಿಯಾಗುವ ಸಮಯ ದಲ್ಲಿ ರಾಮಗುಪ್ತನು ಮತ್ತೊಂದು ಸಾರಿ ಬಂದು ಕುಶಾಲನಿಗೆ ತನ್ನ ಚಿಕ್ಕ ಮಗನು ತಿಂಗಳಿಗೆ ಹತ್ತು ವರಹ ಸಂಬಳವಷ್ಟೇ ಕೊಡುವನೆಂದು ತಿಳಿದು, " ಚೆನ್ನಾಗಿದೆ ! ನಿನ್ನ ಅಣ್ಣನಿಂದಾಗದ ಕೆಲಸ ನಿನ್ನಿಂದ ಆಗುತ್ತದೆಂದಾಯಿತು. ಹೇಗೆ ಮಾಡಿದೆಯೆಂದು ನಾನೇನೂ ಕೇಳಲಾರೆ. ಅದೆಲ್ಲಾ ಮುಖ್ಯವಲ್ಲ. ಭಾಷೆ ಕೂಡ ತಿಳಿಯದ ಪರದೇಶಗಳಿಗೆ ಹೋಗಿ, ಸರಿಯಾಗಿ ವ್ಯಾಪಾರ ಮಾಡಿ ಗೆದ್ದು ಬರುವುದೆಂದರೆ ಸುಲಭ ವಲ್ಲ ಗೊತ್ತಾ ? ನೀನು ಕಾರ್ಯಸಾಧಕನು. ನಿನ್ನನ್ನೇ ಹಡಗಿನಲ್ಲಿ ಕಳುಹಿಸಲು ನಿಶ್ಚಯಿಸಿದ್ದೇನೆ " ಎಂದನು.

ಈ ಸಮಾಚಾರವನ್ನು ತಿಳಿದು ಅಣ್ಣನಾದ ಮುರ ಹರಿ ಆಶ್ಚರ್ಯಪಟ್ಟು, ಸಂತೋಷದಿಂದಲೇ ತಮ್ಮನ ಬಳಿಗೆ ಬಂದು ಮೆಚ್ಚಿಗೆ ವ್ಯಕ್ತಪಡಿಸಿ, " ಕುಶಾಲನನ್ನು ಹತ್ತೇ ವರಹ ಸಂಬಳದ ಮೇಲೆ ಹೇಗೆ ಒಪ್ಪಿಸಲು ಸಾಧ್ಯವಾಯಿತು ?" ಎಂದು ಕೇಳಿದನು.

" ಕೋಲೂ ಮುರಿಯದೆ ಹಾವೂ ಸಾಯದೆ ಮಾಡಬೇಕಾದಂಥ ಕೆಲವು ಸಂದರ್ಭಗಳು ಬರುತ್ತವೆ. ಕುಶಾಲನಿಗೆ ತಿಂಗಳಿಗೆ ಹತ್ತು ವರಹ ಸಂಬಳ ಕೊಡುತ್ತ ದಿನಕ್ಕೆ ಮೂರು ವರಹ ಭತ್ತೆಯ ಏರ್ಪಾಡು ಮಾಡಿಬಿಟ್ಟೆ. ಆ ಮೂರು ವರಹಗಳು ತಂದೆಯವರು ನನ್ನ ಖರ್ಚಿಗಾಗಿ ಕೊಟ್ಟ ಹಣದಲ್ಲಿ ಉಳಿಕೆ ಮಾಡಿಕೊಟ್ಟಿದ್ದೇನೆ. ಅಷ್ಟೇ ಹೊರತು ಮತ್ತೇನೂ ನಾನು ಮಾಡಿಲ್ಲ. ಸಮಸ್ಯೆ ಸುಲಭದಲ್ಲೇ ತೀರಿಹೋಯಿತು " ಎಂದನು ನರಹರಿ.

" ಅರೆ ! ಈ ಸಣ್ಣ ಉಪಾಯ ನನಗೆ ತೋರಲಿಲ್ಲ ವಲ್ಲ ! ಇನ್ನು ನಾನು ನೌಕಾ ವಾಣಿಜ್ಯ ಹೇಗೆ ಮಾಡಿಯೇನು ? ಅಪ್ಪನ ಪರೀಕ್ಷೆ ಚೆನ್ನಾಗಿದೆ. ಆ ಕೆಲಸಕ್ಕೆ ನಿಜಕ್ಕೂ ನೀನೇ ತಕ್ಕವನು !" ಎಂದು ಮುರಹರಿ ತಮ್ಮನ ಬೆನ್ನು ತಟ್ಟಿದನು.



# ಜ್ಞಾನೋದಯ

ವೆಂಕಟನೆಂಬ ಯುವಕನಿಗೆ ಸೋದರ ಮಾವನ ಮಗಳು ಶ್ರೀದೇವಿಯೊಂದಿಗೆ ಮದುವೆ ನಿಶ್ಚಯವಾಯಿತು. ಈ ಮದುವೆಗೆ ವೆಂಕಟನು ಒಪ್ಪಲು ಅವನ ತಂದೆ ತಾಯಿಗಳ ಬಲವಂತವೇ ಕಾರಣವಾಗಿತ್ತು.

ಅವನ ಸ್ನೇಹಿತರು ತಮ್ಮ ತಮ್ಮೊಳಗೆ ಆ ಮದುವೆಯನ್ನು ಕುರಿತು ಹೇಳಿಕೊಳ್ಳುವಾಗ "ಆ ಶ್ರೀದೇವಿ ಕುರೂಪಿಣಿ. ಅದರ ಮೇಲೆ ಗಯ್ಯಾಳಿ ಹೆಣ್ಣು. ರಣಚಂಡಿ. ಅಂಥವಳನ್ನು ಆ ವೆಂಕಟನು ಮದು ಮಾಡಿಕೊಳ್ಳುತ್ತಾನೆಂದರೆ ಸೋದರ ಮಾವನ ಆಸ್ತಿಗೋಸ್ಕರವೇ ಹೊರತು ಬೇರೆಯಲ್ಲ" ಎಂದು ಹಿಂದಿನಿಂದ ಗುಸು ಗುಸು ಹೇಳುತ್ತಿದ್ದರು.

ಮೊದಲೇ ಶ್ರೀದೇವಿಯನ್ನು ಮದುವೆಯಾಗಲು ಇಷ್ಟವಿಲ್ಲದ ವೆಂಕಟನಿಗೆ ಸ್ನೇಹಿತರ ಆ ಮಾತುಗಳು ಗೊತ್ತಾಗಿ ಬಹಳ ಚಿಂತೆಯನ್ನುಂಟು ಮಾಡಿತು. ಅವನು ರಾತಾ ರಾತ್ರಿಯಲ್ಲಿ ಹೇಳದೆ ಕೇಳದೆ ಮನೆಯಿಂದ ಹೊರಟು ಹತ್ತು ಹರದಾರಿ ದೂರದಲ್ಲಿರುವ ಸದಾನಂದ ಸ್ವಾಮಿಯ ಆಶ್ರಮ ಸೇರಿ, ಅಲ್ಲಿಯ ಸನ್ಯಾಸೀ ಶಿಷ್ಯಗಣದೊಂದಿಗೆ ಸನ್ಯಾಸಿಯಾಗಿ ಇದ್ದು ಬಿಟ್ಟನು.

ಆರು ತಿಂಗಳು ಕಳೆಯುವುದರೊಳಗೇ ವೆಂಕಟನು ಅಲ್ಲಿಯ ಆಶ್ರಮ ನಿಯಮಗಳಿಗೂ ಕಟ್ಟುಪಾಡು ಗಳಿಗೂ ತಡೆದುಕೊಳ್ಳಲಾಗದೆ ಬೇಸತ್ತು ಮನೆಗೆ ಹಿಂದಿರುಗಿ ಬಂದನು. ತನಗೆ ಶ್ರೀದೇವಿಯೊಂದಿಗೆ ಮದುವೆ ಯಾಗಲು ಮನಸ್ಸಾಗಿದೆ ಎಂದನು. ಒಂದುವಾರದೊಳಗೇ ಮದುವೆಯೂ ಆಯಿತು.

ವೆಂಕಟನ ಸ್ನೇಹಿತರು ಅವನೊಂದಿಗೆ ನಗುತ್ತ "ಸಂಸಾರದಲ್ಲಿ ಬೇಸತ್ತು ಸನ್ಯಾಸಿಗಳೊಂದಿಗೆ ಸೇರಿದವ ರಿದ್ದಾರೆಯೇ ಹೊರತು ನಿನ್ನ ಹಾಗೆ ಅದಕ್ಕೆ ವಿರುದ್ಧವಾಗಿ ಪ್ರವರ್ತಿಸಿದವರನ್ನು ನಾವರಿಯೆವು!" ಎಂದರು.

ವೆಂಕಟನು ನಕ್ಕು, "ಅದಕ್ಕೆ ಆಶ್ಚರ್ಯ ಪಡಲು ಏನೂ ಇಲ್ಲ. ಆರು ತಿಂಗಳು ಸನ್ಯಾಸಿಗಳೊಂದಿಗೆ ಕಾಲ ಕಳೆದ ಮೇಲೆ ಕುಟುಂಬವೇ ಸ್ವರ್ಗಪ್ರಾಯವೆಂಬ ನಂಬುಗೆಯುಂಟಾಯಿತು!" ಎಂದನು.





# ಪ್ರಾಣದಾತರು

ಒಂದುದಿನ ಮಧ್ಯಾಹ್ನದ ವೇಳೆಯಲ್ಲಿ ಏನೋ ಕೆಲಸದ ಮೇಲೆ ಸಾಗರನೆಂಬ ಯುವಕನು ಮನೆಯಿಂದ ಹೊರಟನು. ಅವನು ತೋಟದ ಹಳ್ಳಿ ಎಂಬ ಗ್ರಾಮದ ಹತ್ತಿರ ಬರುವಷ್ಟರಲ್ಲೇ ಕತ್ತಲಾಗಿಬಿಟ್ಟಿತು. ದಾರಿಯಲ್ಲಿ ಒಂದು ಡೊಂಬರಾಟವನ್ನು ನೋಡುತ್ತ ಹೊತ್ತು ಕಳೆದುದು ಗೊತ್ತಾಗದೆ ಈಗ ಈ ರಾತ್ರಿಯನ್ನು ಸಂಧಿಸಬೇಕಾಯಿತೆಂದು ನೊಂದುಕೊಂಡನು. ತಂಗಲು ತಕ್ಕ ಜಾಗ ಹುಡುಕುವುದರಲ್ಲೇ ರಾತ್ರಿಯ ಎರಡನೇ ಜಾಮವೇ ಕಾಲಿಟ್ಟಿತು.

ಆಗ ವಿಪರೀತವಾದ ಚಳಿಗಾಳಿ ಬೇರೆ ಶುರುವಾಯಿತು. ಯಾವ ಜಗಲಿಯನ್ನಾದರೂ ಆಶ್ರಯಿಸಬೇಕೆಂದು ಅವನು ಬೀದಿ ಬೀದಿ ಅಲೆಯುತ್ತಿರಲು, ಒಂದು ಹೆಂಚಿನ ಮನೆಯಲ್ಲಿ ಚಿಕ್ಕದೊಂದು ದೀಪದ ಬೆಳಕು ಕಾಣಿಸಿತು.

ಸಾಗರನು ಆ ಮನೆಯ ಕಡೆಗೇ ಹೋದನು. ಬಾಗಿಲಲ್ಲೇ ಒಬ್ಬಳು ಹುಡುಗಿ ಹೊರಗೆ ನೋಡುತ್ತಾ ನಿಂತಿದ್ದಳು. ಅದನ್ನು ನೋಡಿ ಸಾಗರನು ಆಶ್ಚರ್ಯಪಡುತ್ತ ಅವಳ ಸಮೀಪವೇ ಹೋಗಿ, "ನಾನೊಬ್ಬ ಪ್ರಯಾಣಿಕ. ಈ ಊರಿಗೆ ಹೊಸಬ. ಈ ರಾತ್ರಿಯನ್ನು ಕಳೆಯಲು ಸ್ವಲ್ಪ ಜಾಗ ತೋರಿಸುವಿರಾ?" ಎಂದು ಕೇಳಿದನು.

ಆ ಹುಡುಗಿ ಕೂಡಲೇ ಉತ್ತರ ಕೊಡದೆ ಸಾಗರನನ್ನು ಪರೀಕ್ಷಿಸಿ ನೋಡಿದಳು. ಏತಕ್ಕೋ ಅವಳು ತುಂಬಾ ಕಳವಳದಲ್ಲಿ ತೊಳಲುತ್ತಿದ್ದಾಳೆಂದು ಸಾಗರನಿಗೆ ತೋರಿತು.

"ನೀವು ನನಗೊಂದು ಸಣ್ಣ ಸಹಾಯ ಮಾಡಬಲ್ಲಿರಾ ?" ಎಂದಳು ಅವಳು ದುಗುಡದ ಸ್ವರದಲ್ಲಿ.

ಆ ಪ್ರಶ್ನೆ ಅವನನ್ನು ಆಶ್ಚರ್ಯಪಡಿಸಿತು. ಅವನ ಉತ್ತರಕ್ಕೆ ಕಾಯದೇ ಅವಳೇ ಹೇಳತೊಡಗಿದಳು. "ಬೆಳಗ್ಗೆಯೇ ಅಡವಿಗೆ ಹೋದ ಅಪ್ಪ ಇದುವರೆಗೂ ಮನೆಗೆ ತಿರುಗಿ ಬರಲಿಲ್ಲ. ನನಗೆ ತುಂಬಾ ದಿಗಿಲಾಗಿದೆ. ಅವರನ್ನು ಹುಡುಕಲು ನನ್ನ ಜೊತೆಗೆ ಸ್ವಲ್ಪ ಕಾಡಿನವರೆಗೆ ಬರುವಿರಾ ?" ಎಂದು ಉಕ್ಕುವ ದುಃಖವನ್ನು ತಡೆದುಕೊಳ್ಳುತ್ತಾ ಹೇಳಿದಳು ಆ ಹುಡುಗಿ.

ನಿಜಕ್ಕೂ ಸಾಗರನಿಗೆ ತನ್ನ ಕಷ್ಟ ಮರೆತು ಅವಳ ಮೇಲೆ ದಯೆ ಒಸರಿತು. ಅಷ್ಟು ದೂರ ನಡೆದು ಬಂದ ಅವನಿಗೆ ತುಂಬಾ ಬಳಲಿಕೆಯಾಗಿದ್ದರೂ ಅದನ್ನು

ಎಂ. ಕೆ. ಈಶ್ವರರಾವ್



ಮರೆತು, "ಅಗತ್ಯವಾಗಿ ಬರುತ್ತೇನೆ, ಹೋಗೋಣ, ಬೇಗನೇ ಹೊರಡಿ" ಎಂದನು.

ಅವಳು ತಟ್ಟನೆ ಮನೆಗೆ ಬೀಗ ಹಾಕಿ ಲಾಂದ್ರ ತೆಗೆದುಕೊಂಡು ಮುಂದೆ ಹೊರಟಳು. ನಡೆಯುತ್ತಾ ತನ್ನ ಸಮಾಚಾರಗಳನ್ನು ಹೇಳಿದಳು. ಅವಳ ಹೆಸರು ಕಲ್ಯಾಣಿ. ಮೊದಲು ಅವಳ ತಂದೆ ಕಾಡಿನಿಂದ ಕಟ್ಟಿಗೆ ಕಡಿದು ತಂದುಕೊಂಡಿದ್ದನು. ಆದರೆ ಇತ್ತೀಚೆಗೆ ಪ್ರಾಯ ಮೀರಿದುದರಿಂದ ಶಕ್ತಿಕುಂದಿ, ಕಟ್ಟಿಗೆಯ ಕೆಲಸವನ್ನು ಮಾಡಲಾಗದೆ ಬಿಟ್ಟು, ಕಾಡಿನಿಂದ ವೈದ್ಯರಿಗೆ ಬೇಕಾದ ಬೇರು ನಾರುಗಳನ್ನೂ, ಗಡ್ಡೆ ಗೆಣಸು, ಹಣ್ಣು ಕಾಯಿ, ಚಿಗುರುಗಳನ್ನೂ ತಂದು ಸಂತೆಯಲ್ಲಿ ಮಾರುತ್ತಿದ್ದನು. ಆದರಿಂದ ಒಳ್ಳೆಯ ಆದಾಯವೇ ಬರುತ್ತಿತ್ತು. ಸಾಧಾರಣವಾಗಿ ಬೆಳಿಗ್ಗೆ ಕಾಡಿಗೆ ಹೋಗಿ ಸಾಯಂಕಾಲಕ್ಕೆಲ್ಲ ಮನೆಗೆ ಬಂದೇ ಬರುವನು. ಈ ದಿನ ಅರ್ಧರಾತ್ರಿಯಾದರೂ ಹಿಂದಿರುಗಿ ಬಾರದಿರುವುದನ್ನು ನೋಡಿ ಮಗಳಿಗಾದ ಚಿಂತೆ ವರ್ಣಿಸಲಸದಳ.

"ಮಾತಿಗೂ ಸಹಾಯಕ್ಕೂ ಬರುವಂಥ ನೆರೆ ಹೊರೆಯವರು ಅದೃಷ್ಟವಂತರಿಗೆ ಹೊರತು ನಮ್ಮಂಥವರಿಗೆ ಸಿಕ್ಕರು. ಎಷ್ಟು ಬೇಡಿಕೊಂಡರೂ ಯಾರೊಬ್ಬರೂ ಈ ಚಳಿಗೆ ನನ್ನೊಂದಿಗೆ ಬರಲು ಒಪ್ಪಲಿಲ್ಲ. ಏನೋ ಒಣ ಸಮಾಧಾನ ಹೇಳುತ್ತಾರೆ, ಅಷ್ಟೇ" ಎಂದಳು ಕಲ್ಯಾಣಿ. ಪಾಪ ಮನೆಯಲ್ಲಿರುವವರು ತಂದೆ ಮಗಳು ಇಬ್ಬರೇ. ತಾಯಿ ಎಂದೋ ಸತ್ತಿದ್ದಳು. ಇದ್ದ ಅಕ್ಕಂದಿರಿಬ್ಬರಿಗೆ ಮದುವೆಯಾಗಿ ಗಂಡನೊಂದಿಗಿದ್ದಾರಂತೆ. ತಂದೆಯನ್ನು ಪೋಷಿಸಿಕೊಂಡಿರುವಳು ಈ ಮಗಳು.

ಕಲ್ಯಾಣಿಯೂ ಮದುವೆಯ ವಯಸ್ಸಿಗೆ ಬಂದ ಹುಡುಗಿಯೇ.

ಈ ಮೊದಲು ಅನೇಕ ಬಾರಿ ತಂದೆಯೊಂದಿಗೆ ಕಾಡಿಗೆ ಹೋದ ಅನುಭವ ಅವಳಿಗಿತ್ತು. ತಂದೆ ಯಾವ ಪ್ರಾಂತದಲ್ಲಿ ತಿರುಗುವನೆಂಬುದು ಅವಳಿಗೆ ಗೊತ್ತಿತ್ತು. ಅಲ್ಲಿಗೆ ಹೋಗಿ ನಾಲ್ಕು ಕಡೆಗಳಿಗೂ ಮುಖ ತಿರುಗಿಸಿ "ಅಪ್ಪಾ! ಅಪ್ಪಾ!" ಎಂದು ಕೊರಳೆತ್ತಿ ಕೂಗಿದಳು.

ಕಲ್ಯಾಣಿಯ ತಂದೆಯ ಹೆಸರು ಬಸವಣ್ಣನೆಂದು ತಿಳಿದು, ಸಾಗರನು ಕೂಡಾ ಅನೇಕ ಸಾರಿ ಗಟ್ಟಿಯಾಗಿ ಕೂಗಿ ಕೂಗಿ ಕರೆದನು. ಅವನ ಕೂಗಿಗೆ ಮರಗಳಲ್ಲಿದ್ದ ಹಕ್ಕಿಪಕ್ಕಿಗಳು ಕೋಲಾಹಲವಾಗಿ ಕೂಗಿಕೊಂಡುವೇ ಹೊರತು ಬಸವಣ್ಣನು ಮಾತ್ರ ಓಗೊಡಲಿಲ್ಲ. ಇಬ್ಬರೂ ಕೂಗಾಡುತ್ತಾ ಅಡವಿಯಲ್ಲಿ ಅತ್ತ ಇತ್ತ ತಿರುಗಿ ಬೆಳಗಾಗುವ ಹೊತ್ತಿಗೆ ನಿರಾಶೆಯಿಂದ ಮನೆಗೆ ಹಿಂದಿರುಗಿದರು. ಕಲ್ಯಾಣಿಗಂತೂ ಕಣ್ಣೀರು ಸುರಿಯುತ್ತಿದ್ದಿತು.

ಕಲ್ಯಾಣಿ ದುಃಖವನ್ನು ತಾಳಿಕೊಳ್ಳಲಾಗದೆ ಅಳಲಿಕ್ಕೇ ಶುರು ಮಾಡಿದಳು. ಸಾಗರನು ಅವಳಿಗೆ ಧೈರ್ಯ ಹೇಳುತ್ತ, "ನಿನ್ನ ತಂದೆಗೆ ಅಕಸ್ಮಾತ್ತಾಗಿ



ಏನೋ ಕೆಲಸ ತಗಲಿ ಕಾಡಿನಿಂದ ಮತ್ತಾವ ಊರಿಗಾದರೂ ಹೋಗಿರಬಹುದು. ಒಮ್ಮೆಗೇ ನಿರಾಶಳಾಗಿ ಹೀಗೆ ಅಳಬಾರದು. ಸಾಯಂಕಾಲದವರೆಗೂ ನೋಡೋಣ " ಎಂದನು.

ಮಧ್ಯಾಹ್ನ ತಿರುಗಿ ಸಾಯಂಕಾಲವಾಗಲೂ ತೊಡಗಿತು. ಬೀದಿಯಲ್ಲಿ ಐವತ್ತು ವಯಸ್ಸಿನವನೊಬ್ಬನು ಕಲ್ಯಾಣಿಯ ಹೆಸರು ಹೇಳಿ ಕೂಗಿ ಕರೆದನು. ಕಲ್ಯಾಣಿ ಓಡೋಡಿ ಹೊರಗೆ ಬಂದಳು. ಅವನು ಕಾಡಿನಿಂದ ಕಟ್ಟಿಗೆ ಕಡಿದು ಮಾರಿಕೊಂಡಿರುವ ಸೋಮಣ್ಣನೇ.

ಅವನು ಕಾಡಿನ ವಸ್ತುಗಳಿಂದ ಅರ್ಧ ತುಂಬಿದ ಒಂದು ಬುಟ್ಟಿಯನ್ನು ಕಲ್ಯಾಣಿಗೆ ಕೊಡುತ್ತ, " ಇದು ನಿಮ್ಮ ಬುಟ್ಟಿ, ಕಾಡಿನಲ್ಲಿತ್ತು. ಸ್ವಲ್ಪ ದೂರದಲ್ಲಿ ಈ ಚಪ್ಪಲಿಗಳೂ ಸಿಕ್ಕಿದುವು. ಇವು ನಿನ್ನ ತಂದೆಯವರದೇ ತಾನೇ ? ಹಾಗೇನೂ ಆಗಿರಲಿಕ್ಕಿಲ್ಲ ಅಂತ ಕಾಣುತ್ತೆ. ಇತ್ತೀಚಿಗೆ ಅದೇ ಪ್ರದೇಶದಲ್ಲಿ ನಮ್ಮ ಸಾಂಬಣ್ಣನನ್ನು ಹುಲಿ ಎಳೆದುಕೊಂಡು ಹೋದ ಸಂಗತಿ ಗೊತ್ತಿದೆಯಷ್ಟೇ ? ನಿನ್ನ ಅಪ್ಪನಿಗೆ ಹಾಗೇನೂ ಆಗಿರಲಿಕ್ಕಿಲ್ಲ " ಎಂದು ತಲೆ ತಗ್ಗಿಸಿಕೊಂಡು ಹೊರಟು ಹೋದನು.

ಅವನ ಮಾತು ಕೇಳಿದ ಕೂಡಲೇ ಕಲ್ಯಾಣಿ ಮೂರ್ಛೆಹೋಗಿ ಬಿದ್ದುಬಿಟ್ಟಳು. ಸಾಗರನು ಅವಳ ಮುಖಕ್ಕೆ ನೀರು ಚಿಮುಕಿಸಿ ಉಪಚಾರ ಮಾಡುತ್ತಾ ಕುಳಿತನು. ಆಕಸ್ಮಿಕವಾಗಿ ಬಂದ ಈ ಅನಿರೀಕ್ಷಿತವಾದ ಬಂಧನದಿಂದ ಹೇಗೆ ಪಾರಾಗುವುದೆಂದು ಅವನಿಗೆ ಗೊತ್ತಾಗಲಿಲ್ಲ. ಸುಮಾರು ನಡುರಾತ್ರಿಯ ಹೊತ್ತಿನಲ್ಲಿ ಹಾಗೆಯೇ ತೂಕಡಿಸುತ್ತಾ ಅರೆನಿದ್ರೆಗೆ ಜಾರಿಕೊಂಡನು.

ಹೊರಗಿನ ಬಾಗಿಲು ತೆರೆದ ಕಿರ್ರೆಂಬ ಶಬ್ದಕ್ಕೆ ಅವನಿಗೆ ಎಚ್ಚರವಾಯಿತು. ಮನೆಯೊಳಗೆಲ್ಲಿಯೂ ಕಲ್ಯಾಣಿ ಕಾಣಲಿಲ್ಲ. ಗಾಬರಿಯಿಂದ ಸಾಗರನ ಮಂಪರು ಹಾರಿಹೋಯಿತು. ಬೇಗ ಬೇಗನೇ ಹೊರಗೆ ಹೋದನು. ಕಲ್ಯಾಣಿ ತಲೆ ಕೆದರಿಕೊಂಡು ಬಿಕ್ಕುತ್ತಾ ಬಾವಿಯ ಕಡೆಗೆ ಹೋಗುತ್ತಿದ್ದಳು.

ಸಾಗರನು ಹೋಗಿ ಅವಳ ಕೈ ಹಿಡಿದುಕೊಂಡು " ಏನು ಕೆಲಸ ಮಾಡಲು ಹೊರಟೆ ? ದೊಡ್ಡ ತಪ್ಪು. ಒಳಗೆ ನಡೆ " ಎನ್ನುತ್ತ ಅವಳನ್ನು ಒಳಗೆಳೆದುಕೊಂಡು ಬಂದನು.

" ನಾನು ಬದುಕಿದ್ದು ಏನು ಲಾಭ ? ಈ ಲೋಕದಲ್ಲಿ ಇನ್ನು ನನಗೆ ಯಾರು ದಿಕ್ಕು ? ಹೇಗೆ ಬದುಕಿರಲಿ ?" ಎಂದು ಕಲ್ಯಾಣಿ ದೊಡ್ಡ ದನಿಯಿಂದ ಅಳತೊಡಗಿದಳು.

ಸಾಗರನು ಅವಳಿಗೆ ಸಮಾಧಾನ ಹೇಳುತ್ತ, " ನಿನಗೆ ನಾನಿದ್ದೇನೆ. ದೇವರೇ ನನ್ನನ್ನು ಇಲ್ಲಿ ತಂದು ಬಿಟ್ಟಿದ್ದಾನೆ. ನನ್ನ ತಂದೆ ತಾಯಿಯರನ್ನು ಒಪ್ಪಿಸಿ ನಿನ್ನನ್ನೇ ಮದುವೆಯಾಗುತ್ತೇನೆ, ನಿರಾಶಳಾಗಬೇಡ. ಧೈರ್ಯವಾಗಿರು " ಎಂದನು.

ಕಲ್ಯಾಣಿ ತನ್ನ ಸ್ಥಾನದಲ್ಲಿ ಮಲಗಿದಳು. ಬೆಳಗಾಗುವ ಹೊತ್ತಿನಲ್ಲಿ ಒಂಟೆತ್ತಿನ ಗಾಡಿಯೊಂದು ಆ ಮನೆಯ ಮುಂದೆ ಬಂದು ನಿಂತಿತು. ಕಲ್ಯಾಣಿ ಓಡಿಬಂದು ಹೊರ ಬಾಗಿಲು ತೆರೆದು, ಗಾಡಿಯಿಂದ ಇಳಿಯುವ ತಂದೆಯನ್ನು ನೋಡಿ ಆನಂದ ತಾಳಲಾಗದೆ ಕೀಚುಗೊರಳಿನಿಂದ ಕೂಗಿದಳು. ನೀರಸನಾದ ಬಸವಣ್ಣನನ್ನು ಯುವಕನೊಬ್ಬನು ಗಾಡಿಯಿಂದ ಇಳಿಸುತ್ತ ಮೆಲ್ಲನೆ ನಡೆಯಿಸಿಕೊಂಡು ಮನೆಯೊಳಗೆ ಕರೆದು ತಂದನು.

ಬಸವಣ್ಣ ಆಯಾಸಪಡುತ್ತ ತನ್ನ ಬೈರಾಸಿನಿಂದ ಮಗಳ ಕಣ್ಣೀರನ್ನು ಒರೆಸುತ್ತ ನಡೆದ ಸಂಗತಿಯನ್ನು ಹೇಳಿದನು.

ಬಸವಣ್ಣ ಕಾಡಿನಲ್ಲಿ ಉದುರಿದ ನೇರಿಳೆ ಹಣ್ಣುಗಳನ್ನು ಹೆಕ್ಕುತ್ತ, ಅಜಾಗರೂಕತೆಯಿಂದ ಮರದ ಬುಡದ ಒಂದು ಹುತ್ತದ ಮೇಲೆ ಕಾಲಿಟ್ಟನು. ಮರುಕ್ಷಣದಲ್ಲಿ ಕಾಲಿಗೆ ಚುರ್ರೆಂದು ಏನೋ ಕಚ್ಚಿತು. ಅದೇ ಸಮಯದಲ್ಲಿ ಭುಸ್ಸೆಂಬ ಶಬ್ದದೊಂದಿಗೆ ಸುಳಿಸುಳಿದೋಡಿದ ನಾಗರಹಾವನ್ನು ನೋಡಿ, ಬಸವಣ್ಣ ಕಣ್ಣು ಕತ್ತಲೆ ಕವಿದು ನೆಲದಲ್ಲಿ ಬಿದ್ದನು.

"ಆಮೇಲೆ ಏನಾಯಿತೆಂದು ಇವರಿಗೆ ಗೊತ್ತಿಲ್ಲ. ನಾನು ಹೇಳುತ್ತೇನೆ" ಎಂದು ಬಸವಣ್ಣನನ್ನು ಕರೆದುಕೊಂಡು ಬಂದ ಯುವಕನು ಹೇಳತೊಡಗಿದನು.

"ನನ್ನ ಹೆಸರು ರಾಜಾರಾಂ. ಚಿಕ್ಕತನದಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡ ಅನಾಥ ನಾನು. ಊರವರಾರೂ ನನ್ನನ್ನು ಆದರಿಸುತ್ತಿರಲಿಲ್ಲ. ನನ್ನನ್ನು ಯಾವಾಗಲೂ ಅವಮಾನಿಸುತ್ತಾ ಇರುತ್ತಾರೆ. ಮೊನ್ನೆ ನಮ್ಮ ಊರಿನಲ್ಲಿ ಗ್ರಾಮ ದೇವತೆಯ ಜಾತ್ರೆ ನಡೆಯುತ್ತಿತ್ತು. ಪ್ರಾಣಿ ಬಲಿಗಳನ್ನೂ, ಭಕ್ತರ ಆರ್ಭಟಗಳನ್ನೂ ಕೇಳಲಾಗದೆ ನೋಡಲಾಗದೆ ಕಾಡಿನ ಕಡೆಗೆ ಹೋಗಿಬಿಟ್ಟೆ. ಅಲ್ಲಿ ಇವರು ಒಂದು ಮರದ ಕೆಳಗೆ ಬಾಯಿಯಲ್ಲಿ ನೊರೆ ಕಕ್ಕಿಕೊಂಡು ಬಿದ್ದಿರುವುದನ್ನು ಕಂಡೆ. ಅದು ಹಾವಿನ ಕಡಿತವೆಂದು ಕೂಡಲೇ ನನಗೆ ಗೊತ್ತಾಯಿತು. ಇವರನ್ನು ಎತ್ತಿ ಹೆಗಲ ಮೇಲೆ ಹೊತ್ತುಕೊಂಡು ಪಕ್ಕದ ಊರಿನಲ್ಲಿದ್ದ ವೈದ್ಯರ ಮನೆಗೆ





ಹೋದೆ. ಇವರ ಅದೃಷ್ಟ, ವೈದ್ಯರು ಮನೆಯಲ್ಲಿದ್ದರು. ನಿಮ್ಮ ತಂದೆ ಸಾವಿನಿಂದ ಉಳಿದರು " ಎಂದನು.

"ನಿಮ್ಮ ಉಪಕಾರ ಜನ್ಮ ಜನ್ಮಾಂತರಗಳಿಗೂ ಮರೆಯಲಾರೆ. ನೀವು ನನ್ನ ತಂದೆಯ ಪ್ರಾಣವನ್ನು ಕಾಪಾಡಿದ್ದೀರಿ. ಇವರು ನನ್ನ ಪ್ರಾಣ ಕಾಪಾಡಿದ್ದಾರೆ" ಎಂದು ಕಲ್ಯಾಣಿ ಸಾಗರನನ್ನು ಅವರಿಬ್ಬರಿಗೂ ಪರಿಚಯ ಮಾಡಿಸಿದಳು.

ಅಪ್ಪನನ್ನೂ, ಮಗಳನ್ನೂ ಕಾಪಾಡಿದ ಸಾಗರನೂ, ರಾಜಾರಾಂನೂ ಆ ಕ್ಷಣದಿಂದ ಆಪ್ತಮಿತ್ರರಂತಾದರು. ಆ ದಿನ ಸಾಯಂಕಾಲ ಅವರಿಬ್ಬರೂ ನದಿಯ ಬದಿಗೆ ತಿರುಗಾಡಲು ಹೊರಟರು.

ಆಗ ಬಸವಣ್ಣನು ತನ್ನ ಮಗಳನ್ನು ನೋಡಿ, "ಕಲ್ಯಾಣಿ, ಈ ದಿನದಿಂದ ನನ್ನ ಜೀವ ಉಳಿಸಿದ ರಾಜಾರಾಂ ಅನಾಥನಲ್ಲ. ನಮ್ಮೊಂದಿಗೆ ಇಲ್ಲೇ ಇರುತ್ತಾನೆ. ನಿನ್ನನ್ನು ಅವನಿಗೇ ಕೊಟ್ಟು ಮದುವೆ ಮಾಡುತ್ತೇನೆ" ಎಂದನು.

ತಂದೆಯ ಮಾತು ಕೇಳಿ ಕಲ್ಯಾಣಿ ಬೆಪ್ಪಳಂತಾಗಿ ಮೆಲ್ಲನೆಯಿಂದ "ಅಪ್ಪಾ, ಸಾಗರರು ನನ್ನನ್ನು ಮದುವೆ ಮಾಡಿಕೊಳ್ಳುತ್ತೇನೆ ಅಂದರು. ನಾನೇನು ಮಾಡಲಿ ?" ಎಂದಳು ಮೆಲ್ಲನೆ.

"ನನ್ನ ಪ್ರಾಣ ಉಳಿಸಿದ ರಾಜಾರಾಂನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡುತ್ತೇನೆ ಅಂತ ಹೇಳಿದೆನಲ್ಲಾ. ನಮ್ಮಲ್ಲೇ ಇರಬೇಕೆಂದು ಹೇಳಿ ಒತ್ತಾಯ ಮಾಡಿ ಕರೆದುಕೊಂಡು ಬಂದೆ " ಎಂದನು ಬಸವಣ್ಣ.

"ಸಾಗರರು ನನ್ನ ಪ್ರಾಣವನ್ನು ಕಾಪಾಡಿದ್ದಾರಲ್ಲಾ ?" ಎಂದಳು ಕಲ್ಯಾಣಿ.

ಬಸವಣ್ಣನು ಸ್ವಲ್ಪ ಹೊತ್ತು ಯೋಚಿಸಿ, "ಎಲ್ಲವನ್ನೂ ನಿನ್ನ ಇಷ್ಟಕ್ಕೇ ಬಿಡುತ್ತೇನೆ. ನೀನು ಯಾರನ್ನು ಮಾಡಿಕೊಂಡರೂ ಸರಿ, ನನಗೆ ಸಂತೋಷವೇ ಮಗಳೇ " ಎಂದನು.

ಕಲ್ಯಾಣಿಗೆ ಈ ಸಮಸ್ಯೆಯಿಂದ ಹೇಗೆ ಬಿಡುಗಡೆಯಾಗಬೇಕೆಂದು ಅರ್ಥವಾಗಲಿಲ್ಲ. ಅವಳು ಪ್ರತಿ ಶುಕ್ರವಾರವೂ ಅಮ್ಮನವರ ಗುಡಿಗೆ ಹೋಗುವ ಅಭ್ಯಾಸವಿಟ್ಟುಕೊಂಡಿದ್ದಳು. ತಂದೆ ಮನೆಗೆ ಕ್ಷೇಮವಾಗಿ ತಿರುಗಿ ಬಂದುದಕ್ಕೆ, ಆ ದಿನ ಶುಕ್ರವಾರವಲ್ಲದಿದ್ದರೂ ಸಾಯಂಕಾಲ ಅಮ್ಮನವರ ಆಲಯಕ್ಕೆ ಹೋಗಬೇಕೆಂದು ಭಾವಿಸಿದ್ದಳು.

ಆಲಯದ ದೇವಿಯನ್ನು ಪೂಜಿಸುವ ಅರ್ಚಕನಿಗೆ ಕ್ರಮ ತಪ್ಪದೆ ಬರುವ ಕಲ್ಯಾಣಿಯ ಮೇಲೆ ತುಂಬಾ ವಾತ್ಸಲ್ಯವಿತ್ತು. ಅವಳು ವಾಡಿಕೆಯಿಲ್ಲದ ದಿನ ಬಂದುದನ್ನು ನೋಡಿ ಅರ್ಚಕನಿಗೆ ತುಸು ಆಶ್ಚರ್ಯವಾಯಿತು. ಅವಳು ಪೂಜೆ ಮಾಡಿಸಿದ ಮೇಲೆ "ಏನೋ ವಿಶೇಷವಿದ್ದಹಾಗಿದೆಯಲ್ಲಾ ?" ಎಂದು ಅವಳನ್ನು ಕೇಳಿದನು.

ಕಲ್ಯಾಣಿ ತನ್ನ ಸಮಸ್ಯೆಯನ್ನು ಆತನೊಂದಿಗೆ ಹೇಳಿ, "ಈಗ ಏನು ಮಾಡುವುದೋ ಗೊತ್ತಾಗುವುದಿಲ್ಲ " ಎಂದಳು.

"ಇದು ನಿನ್ನ ಭಾವೀ ಜೀವನದ ಮುಖ್ಯ ವಿಷಯ. ಆದ್ದರಿಂದ ನೀನೇ ಚೆನ್ನಾಗಿ ಆಲೋಚಿಸಿ ಒಂದು ನಿಶ್ಚಯಕ್ಕೆ ಬಂದುಬಿಡು. ಅವರಿಬ್ಬರಲ್ಲಿ ಒಬ್ಬನಿಗೆ ಬೇಸರವಾದೀತೆಂದು ಶಂಕಿಸಬೇಡ" ಎಂದನು ಅರ್ಚಕ.

"ಅಪ್ಪನೂ ಹಾಗೇ ಹೇಳಿದರು. ನನ್ನ ನಿಶ್ಚಯ ಸರಿಯೋ ತಪ್ಪೋ ನೀವೇ ಹೇಳಬೇಕು. ರಾಜಾರಾಂ ನನ್ನ ತಂದೆಯ ಪ್ರಾಣದಾತ. ಸಾಗರರು ನನ್ನನ್ನು ಉಳಿಸಿದರು. ಇವರಿಬ್ಬರೂ ನನಗೆ ಒಪ್ಪಿಗೆಯೇ. ಸಂತೋಷವೇ. ಆದರೆ ಚೆನ್ನಾಗಿ ಆಲೋಚಿಸಿದ ಮೇಲೆ ನಾನು ರಾಜಾರಾಂನನ್ನೇ ಮದುವೆ ಮಾಡಿಕೊಳ್ಳುವುದು ಅಂತ ಮಾಡಿದ್ದೇನೆ" ಎಂದಳು ಕಲ್ಯಾಣಿ.

"ಅವನಲ್ಲಿ ಏನು ಹೆಚ್ಚು? ನಿನ್ನ ಜೀವಕ್ಕಿಂತ ನಿನ್ನ ತಂದೆಯ ಜೀವ ಬೆಲೆಯುಳ್ಳದ್ದೆಂದು ನಿನ್ನ ಉದ್ದೇಶವೇ?" ಎಂದು ಅರ್ಚಕನು ನಗುತ್ತ ಕೇಳಿದನು.

"ನಾನು ಜೀವನದ ಬೆಲೆಯನ್ನು ಗಣಿಸಿ ಹೇಳಲಿಲ್ಲ. ಅವರಿಬ್ಬರಿಗೂ ನಾವು ಆಜನ್ಮಾಂತ ಕೃತಜ್ಞರೇ ನಿಜ. ನಾನು ನನ್ನ ಅಪ್ಪ ಇನ್ನಿಲ್ಲ ಎಂಬ ದುಃಖದಲ್ಲಿ ಬದುಕನ್ನೇ ಕಳೆದುಕೊಳ್ಳಲಿದ್ದೆ. ತಂದೆ ಬದುಕಿರುವುದರಿಂದ ಅದು ಹೋಯಿತು. ಅದಕ್ಕೆ ಕಾರಣನಾದ ರಾಜಾರಾಂ ಯಾವ ಆದರಣೆಯೂ ಇಲ್ಲದಂತಹ ಪರಿಸ್ಥಿತಿಯವನು. ಅವನ ಮನಸ್ಸಿನ ನೋವು ಎಂತಹುದೆಂಬುದೆಂಬುದು ಅರ್ಥವಾಗುತ್ತದೆ. ಆತ ನನ್ನು ಅಪ್ಪನೇ ಅಳಿಯನಾಗಿ ನಿರ್ಣಯಿಸಿ ಮನೆಗೆ ಕರೆದು ತಂದಿದ್ದಾರೆ. ಅದು ಹಿರಿಯರ ಧರ್ಮ ಕೂಡಾ. ಸಾಗರರು ನನ್ನ ಮೇಲೆ ಕರುಣೆಗೊಂಡು ತಾವಾಗಿ ತಾನು ಮದುವೆಯಾಗುವೆನೆಂದು ಹೇಳಿದ್ದು. ಅದಕ್ಕೆ ನಾನು ಒಪ್ಪಿ ಯಾವ ವಾಗ್ದಾನವನ್ನೂ ಮಾಡಿಲ್ಲ. ಆದ್ದರಿಂದ ನಾನು ಅಪ್ಪ ನಿಶ್ಚಯಿಸಿದ ರಾಜಾರಾಂನನ್ನೇ ವಿವಾಹವಾಗುವುದು ಧರ್ಮ ಅನಿಸುತ್ತದೆ" ಎಂದಳು ಕಲ್ಯಾಣಿ.

ಅರ್ಚಕನು ಮುಗುಳು ನಗೆಯನ್ನು ಸೂಸುತ್ತ ತಲೆದೂಗಿದನು.

ಕಲ್ಯಾಣಿ ಮನೆಗೆ ಹೋಗಿ ತನ್ನ ನಿರ್ಣಯವೇನೆಂದು ತಂದೆಯೊಂದಿಗೆ ಹೇಳುತ್ತಿದ್ದಳು. ಅಷ್ಟು ಹೊತ್ತಿಗೆ ತಿರುಗಾಡಲು ಹೋದ ರಾಜಾರಾಂ ಮತ್ತು ಸಾಗರರು ಹಿಂದಿರುಗಿ ಬಂದು ಕಲ್ಯಾಣಿಯ ನಿರ್ಣಯವನ್ನು ತಿಳಿದುಕೊಂಡರು.

ಅದನ್ನು ಕೇಳಿ ಸಾಗರನು ಮಂದಹಾಸ ತೋರಿಸುತ್ತ, "ಸರಿಯಾದ ನಿರ್ಣಯ ಮಾಡಿದೆ ಕಲ್ಯಾಣೀ! ರಾಜಾರಾಂನಂತಹ ಅದೃಷ್ಟವಂತರು ಅಪೂರ್ವವೇ ಸರಿ. ಬಹಳ ಸಂತೋಷ!" ಎಂದನು. ಅವನ ಮಾತು ಕೇಳಿ ಎಲ್ಲರಿಗೂ ಸಂತೋಷವಾಯಿತು. ಸಾಗರನ ಮುಂದಾಳ್ತನದಲ್ಲೇ ನಡೆಯಿತು ಆ ಮದುವೆ.



# ನ್ಯಾಯದ ಭಾರ

ಕನಕರಾಜನ ಮನೆಯ ಛಾಜು ಹೊದೆಯಲಿಕ್ಕಾಗಿ ಕೆಲಸದ ಹುಡುಗ ಏಣಿಯ ಮೇಲೆ ಹತ್ತಿ, ಜಾರಿ ಕೆಳಗೆ ಬಿದ್ದನು. ಕಾಲಿಗೆ ಭಾರಿ ಪೆಟ್ಟಾಯಿತು.

ಆದರೂ ಆ ಹುಡುಗ ಏಣಿಯನ್ನು ಹೊತ್ತುಕೊಂಡು ಕುಂಟುತ್ತಾ, ಗ್ರಾಮಾಧಿಕಾರಿಯ ಬಳಿಗೆ ಹೋಗಿ, "ಅಯ್ಯಾ, ಕನಕರಾಜರ ಮನೆಯಲ್ಲಿ ಉಪಯೋಗವಿಲ್ಲದ ಈ ಟೊಳ್ಳು ಏಣಿ ಇಟ್ಟುಕೊಂಡಿದ್ದಾರೆ. ನಾನು ಜಾರಿ ಬಿದ್ದು ಕಾಲು ಮುರಿದುಕೊಂಡೆ. ಇದಕ್ಕೆ ತಾಗುವ ಮದ್ದಿನ ಖರ್ಚುಗಳಿಗೆ ನಷ್ಟ ಪರಿಹಾರವನ್ನು ಅವರಿಂದ ಕೊಡಿಸಬೇಕು ಸ್ವಾಮೀ" ಎಂದನು.

ಗ್ರಾಮಾಧಿಕಾರಿ ಕನಕರಾಜನನ್ನು ಕರೆಯಿಸಿ ಕೆಲಸದ ಹುಡುಗನ ಅಹವಾಲೆಯನ್ನು ಅವನಿಗೆ ತಿಳಿಸಿ, ಏನು ಹೇಳುವಿರೆಂದು ಕೇಳಿದನು.

ಕನಕರಾಜನು ಸ್ವಲ್ಪವೂ ಶಂಕಿಸದೆ, "ಅದು ಈ ಹುಡುಗನ ಅಜಾಗ್ರತೆಯಿಂದಲೇ ಆಯಿತು. ಏಣಿ ತುಂಬಾ ಗಟ್ಟಿಯಾಗೇ ಇದೆ. ನೋಡಿರಿ" ಎಂದು ಪಕ್ಕದಲ್ಲಿದ್ದ ಮರಕ್ಕೆ ಆ ಏಣಿಯನ್ನು ಆನಿಸಿ ಅದರ ಮೇಲೆ ಹತ್ತಿದನು. ಆದರೆ ಕನಕರಾಜನು ತುಂಬಾ ದಪ್ಪದವನಾದುದರಿಂದ ಏಣಿ ಲಟ ಲಟನೆ ಮುರಿದುಹೋಯಿತು.

"ಈಗೇನು ಹೇಳುವಿರಿ ?" ಎಂದು ಗ್ರಾಮಾಧಿಕಾರಿ ಕೋಪದಿಂದ ಕೇಳಿದನು.

"ನನ್ನಂಥ ದಪ್ಪದವನು ಹತ್ತಿದ್ದರಿಂದ ತಾನೇ ಏಣಿ ಮುರಿಯಿತು ? ಈ ಹುಡುಗ ಹತ್ತಿದಾಗ ಮುರಿಯಲಿಲ್ಲ. ಹಾಗಿರುವಾಗ ಅದು ಟೊಳ್ಳು ಏಣಿ ಹೇಗಾಗುತ್ತೆ ? ತಪ್ಪು ಹುಡುಗನದೇ ಅಂತ ಗೊತ್ತಾಯಿತಲ್ಲ ?" ಎಂದನು ಕನಕರಾಜ.

ನಷ್ಟ ಪರಿಹಾರ ಕೊಡಬೇಕಾಗಿಲ್ಲವೆಂದೇ ಗ್ರಾಮಾಧಿಕಾರಿಯ ತೀರ್ಪು ಬಂತು. ಹುಡುಗನಿಗೆ ಬಯ್ದು ಬುದ್ಧಿ ಹೇಳಿದನು ಗ್ರಾಮಾಧಿಕಾರಿ.






ಅದ್ಭುತವಾದ ವಿಘ್ನೇಶ್ವರ ಶಿಲ್ಪದೊಳಗಿನ ದೇವತಾ ವಿಗ್ರಹಗಳಿಂದ ಹೊರಡುವ ಗಾನಾಮೃತ ಪಾನದಿಂದ ತನ್ಮಯನಾಗಿ ಹೋದ ಅಗಸ್ತ್ಯನು "ಹೇ! ಅದ್ಭುತ ಗಜಾನನಾ! ನಿನ್ನ ದಿವ್ಯ ವಿಗ್ರಹವನ್ನು ನೀನೇ ಕಡೆದುಕೊಂಡೆಯಾ? ಹೌದು. ಇಂತಹ ಮಹೋನ್ನತ ಶಿಲ್ಪವನ್ನು ನಿನ್ನ ಹೊರತು ಬೇರೆ ಯಾರಿಂದ ಕಡೆಯಲು ಸಾಧ್ಯ!" ಎಂದು ಹೇಳಿಕೊಂಡನು.

ಅವನ ಮಾತಿಗೆ ವಿಗ್ರಹದೊಳಗಿನಿಂದ ಹೀಗೆ ಮಾರ್ನುಡಿ ಹೊರಟಿತು: "ಅಗಸ್ತ್ಯಮಹರ್ಷೀ! ನನಗೋಸ್ಕರ ನಾನು ಶಿಲ್ಪವನ್ನು ಕಡೆದುಕೊಳ್ಳಲಿಲ್ಲ. ನಿನ್ನ ತೃಪ್ತಿಗಾಗಿಯೇ ನಿನ್ನ ಆಸೆಯನ್ನು ನೆರವೇರಿಸಿದ್ದೇನೆ, ಅಷ್ಟೇ. ಆದುದರಿಂದ ಈ ಮಹಾ ಶಿಲ್ಪವು ಸ್ವಲ್ಪ ಕಾಲವಷ್ಟೇ ಇರುತ್ತದೆ. ಆಮೇಲೆ ಅದೃಶ್ಯವಾಗಿ ಹೋಗುತ್ತದೆ. ದ್ವಾಪರಯುಗದಲ್ಲಿ ಧರ್ಮರಾಜನು ಪ್ರಾರಂಭಿಸುವ ಅಶ್ವಮೇಧ ಯಾಗದ ಸಂದರ್ಭದಲ್ಲಿ, ಇದೇ ಸ್ಥಾನದಲ್ಲಿ ಮತ್ತೊಂದು ದೊಡ್ಡದಾದ ನನ್ನ ವಿಗ್ರಹವು ಇಲ್ಲಿ ಪ್ರತಿಷ್ಠಿಸಲ್ಪಡುತ್ತದೆ. ವಾತಾಪಿಗಣಪತಿ ಎಂದು ಆ ವಿಗ್ರಹವು ಪ್ರಸಿದ್ಧವಾಗುತ್ತದೆ".

ಈ ವಿಧವಾಗಿ ಧೌಮ್ಯನು ಅರ್ಜುನನಿಗೆ ಹೇಳುತ್ತಾ "ಅರ್ಜುನಾ, ನಾವೀಗ ನೋಡುವುದು ಆ ಮಹಾದ್ಭುತ ಶಿಲ್ಪವನ್ನೇ," ಎಂದು ಮುಗಿಸಿದನು.

ಅರ್ಜುನನು ಆ ಮಹಾಗಣಪತಿಗೆ ಪ್ರದಕ್ಷಿಣೆಗಳನ್ನು ಮಾಡಿ, ಭಕ್ತಿಶ್ರದ್ಧೆಗಳಿಂದ ಸಾಷ್ಟಾಂಗ ನಮಸ್ಕಾರಗಳನ್ನು ಸಮರ್ಪಿಸಿ ಆ ಮಹಾಶಿಲ್ಪವನ್ನು ಪರಿಶೀಲಿಸಿ ನೋಡಿದನು. ಆ ವಿಘ್ನೇಶ್ವರ ಶಿಲ್ಪವನ್ನು ಅಂಟಿಕೊಂಡು ತ್ರಿಮೂರ್ತಿಗಳು, ಜಗದಂಬೆ, ಲಕ್ಷ್ಮೀ, ಪಾರ್ವತಿ, ಸರಸ್ವತಿಯರು, ನವಗ್ರಹಗಳು ಮೊದಲಾದ ಅನೇಕ ದೇವತೆಗಳು ಶಿಲ್ಪರೂಪಗಳಲ್ಲಿ ಕಡೆಯಲ್ಪಟ್ಟಿದ್ದರು. ವಿಘ್ನೇಶ್ವರನ ಎರಡು ಪಾದಗಳ ಇರುಕಿನೆಡೆಯಲ್ಲಿ ವಿಘ್ನವು ಬಂಧಿಸಲ್ಪಟ್ಟಿತ್ತು. ಇಲಿರಾಜನ ಬಾಲವು ವಿಗ್ರಹದ ಸುತ್ತಲೂ ವಲಯಾಕಾರದಲ್ಲಿ ಸುತ್ತಲ್ಪಟ್ಟಿತ್ತು. ಶಿಲ್ಪದ ಶೋಭೆ



ಯನ್ನು ನೋಡಲು ಸಾವಿರ ಕಣ್ಣುಗಳೂ ಸಾಲವೆಂದು ಅರ್ಜುನನಿಗೆ ತೋರಿತು. ತಣಿವೆತೀರದಂತೆ ನೋಡುತ್ತಾ ಅರ್ಜುನನು ಧೌಮ್ಯನೊಂದಿಗೆ, "ಆಚಾರ್ಯ ದೇವಾ, ಈ ಶಿಲ್ಪವನ್ನು ನೋಡಿ ನಾನು ಧನ್ಯನಾದೆನು. ನನ್ನ ಜನ್ಮ ಸಾರ್ಥಕವಾಯಿತು. ಇಷ್ಟೊಂದು ಮಹನೀಯವಾದ ಶಿಲ್ಪವು ಈ ಪುಣ್ಯಸ್ಥಳದಲ್ಲಿರುವಾಗ, ಇದರ ಸಮೀಪದಲ್ಲಿರುವ ವಾತಾಪಿನಗರವು ಮಹೋನ್ನತ ದಶೆಯನ್ನು ಅನುಭವಿಸಿ ಈಗ ಈ ರೀತಿಯಾಗಿ ಪಾಳುಬಿದ್ದಿದೇಕೆ ? ವಾತಾಪಿನಗರದ ವೃತ್ತಾಂತವನ್ನು ಇನ್ನಿಷ್ಟು ಕೇಳಬೇಕೆಂದು ಕುತೂಹಲವಾಗಿದೆ" ಎಂದನು.

ಧೌಮ್ಯನು ಮತ್ತೆ ಹೇಳಲು ಪ್ರಾರಂಭಿಸಿದನು :

ಅಗಸ್ತ್ಯನು ಲೋಪಾಮುದ್ರೆಯ ಆದೇಶಾನುಸಾರವಾಗಿ ಏನೊಂದನ್ನೂ ಉಳಿಸಿಕೊಳ್ಳದೆ, ಇರುವ ಧನವನ್ನೆಲ್ಲಾ ಎಲ್ಲರಿಗೂ ಹಂಚಿಕೊಟ್ಟು, "ಪ್ರಜಾರಾಜ್ಯ ಪರಿಪಾಲನೆಯ ಬಾಧ್ಯತೆಗಳನ್ನು ನೋಡಿಕೊಂಡು, ಪೌರಧರ್ಮಗಳನ್ನು ಅನುಸರಿಸುತ್ತ ಸುಖವಾಗಿರಿ" ಎಂದು ಪ್ರಜೆಗಳಿಗೆ ಹೇಳಿ, ಎಲ್ಲರ ಅನುಮತಿ ಪಡೆದು ಉಟ್ಟ ಬಟ್ಟೆಗಳೊಂದಿಗೆ ಲೋಪಾಮುದ್ರೆಯನ್ನು ಕರೆದುಕೊಂಡು ನಿಶ್ಚಿಂತನಾಗಿ ಹೊರಟುಹೋದನು.

ವಿಘ್ನೇಶ್ವರ ಮಹಾಶಿಲ್ಪವನ್ನು ಪ್ರಜಾರಾಜ್ಯದ ಅಧಿದೇವತೆಯಾಗಿ ಇಟ್ಟುಕೊಂಡು ಆರಾಧಿಸುತ್ತ ವಾತಾಪಿ ನಗರದ ಪ್ರಜೆಗಳು ಚಿರಕಾಲ ಕ್ರಮಬದ್ಧವಾಗಿ ಸುಖಜೀವನ ನಡೆಸಿದರು. ಹೀಗೆ ತಲಾಂತರಗಳು ಕ್ರಮಿಸಿದಂತೆ ವಾತಾಪಿ ನಗರವು ಪ್ರವರ್ಧಮಾನವಾಗಿ ದೇಶದೇಶಾಂತರಗಳಲ್ಲಿ ಕೂಡಾ ಖ್ಯಾತಿಗೊಂಡಿತು.

ಆಗ ಏನಾಯಿತೆಂದರೆ, ಅಗಸ್ತ್ಯನ ಭಯದಿಂದ ಓಡಿಹೋದ ರಾಕ್ಷಸ ಇಲ್ವಲನು, ಅವನ ಕಣ್ಣಿಗೆ ಬಿದ್ದರೆ ಸಾಯುವೆನೆಂಬ ಭಯದಲ್ಲಿ ವಿಂಧ್ಯಾಟವಿಯಲ್ಲಿ ಊರು ಹೆಸರಿಲ್ಲದ ಕತ್ತಲೆಯಲ್ಲೇ ಬದುಕಿಕೊಂಡಿದ್ದನು. ವಾತಾಪಿ ನಗರದ ಹೆಸರು ಖ್ಯಾತಿಗಳನ್ನು ಕೇಳುತ್ತಲೇ ಇದ್ದನು. ಅನೇಕ ವರ್ಷಗಳಿಂದಲೂ ಅಗಸ್ತ್ಯನು ವಾತಾಪಿ ನಗರಕ್ಕೆ ಬಾರದಿರುವುದನ್ನು ನೋಡಿ, ಇನ್ನು ಬರಲಾರನೆಂಬ ಧೈರ್ಯದಿಂದ, ಅಗಸ್ತ್ಯನ ಸೃಷ್ಟಿಯನ್ನು ನಾಶಮಾಡಲು ಬಯಲಿಗೆ ಬಂದನು.

ಆಗ ಅವನದು ದೊಡ್ಡ ಮನುಷ್ಯನ ವೇಷವಾಗಿತ್ತು. ಮಹಾಧರ್ಮಾತ್ಮನ ಹಾಗೆ ನಟನೆ. ಪ್ರಜಾಸೇವೆಯೇ ತನ್ನ ಜೀವಿತ ಪರಮಾರ್ಥ ಎಂಬವನಂತೆ ರೂಪ ವೇಷಗಳಿಂದ ಪ್ರಜಾ ಜನರ ನಡುವ ಸೇರಿಕೊಂಡನು. ಆಗಿನ ಕಾಲದ ಮಾರ್ಪಾಡಿನೊಂದಿಗೆ ಉಂಟಾದ ಪರಿಸ್ಥಿತಿ ಕೂಡಾ ಇಲ್ವಲನಿಗೆ ಅನುಕೂಲವಾಗಿಯೇ ಇದ್ದಿತು.

ಕಾಲಮಹಿಮೆಯಿಂದ ಈಗ ವಾತಾಪಿ ನಗರದ ಪ್ರಜೆಗಳಲ್ಲಿ ಸ್ವಾರ್ಥಚಿಂತನೆ ಅಂಕುರಿಸಿ ಬೆಳೆಯ

ತೊಡಗಿತ್ತು. ಜ್ಞಾನಪಿಪಾಸೆ ಜನರಲ್ಲಿ ಕಡಿಮೆಯಾಯಿತು. ಪ್ರಜೆಗಳೊಳಗೆ ಭೇದಾಭಿಪ್ರಾಯಗಳೂ ಹೆಚ್ಚು ಕಡಿಮೆಗಳೂ, ಮೇಲ್ತನ ಕೀಳ್ತನಗಳೂ ತಲೆ ಹಾಕಿದುವು. ಬುದ್ಧಿವಂತಿಕೆಗಳು ಬುದ್ಧಿ ಕಡಿಮೆಯಾದವರನ್ನು ವಂಚಿಸಲು ಉಪಯೋಗವಾದುವು. ಅಂತಹ ಪತನ ದಶೆಯ ಪ್ರಾರಂಭದಲ್ಲಿಯೇ ಇಲ್ವಲನು ಒಂದು ಗುಂಪಿನ ಪ್ರಜೆಗಳಿಗೆ ನಾಯಕನಾಗಿ ಮೆರೆಯತೊಡಗಿ, ಇಂದ್ರಜಾಲ ವಿದ್ಯೆಗಳಿಂದ ಅದ್ಭುತ ಪುರುಷನೆನಿಸಿ, ಮಹಾನಾಯಕನಾಗಿ ಎಲ್ಲರನ್ನೂ ವಶಪಡಿಸಿಕೊಳ್ಳುವಷ್ಟು ಸಮರ್ಥನಾದನು. ನಗರದ ಮಧ್ಯದಲ್ಲಿರುವ ವಿಘ್ನೇಶ್ವರನ ಮಹಾಶಿಲ್ಪದ ಮೇಲೆ ಜನರಿಗೆ ಗುರಿ ನಿಂತಿರುವ ವರೆಗೆ ಅಗಸ್ತ್ಯನನ್ನೂ, ಅಗಸ್ತ್ಯನು ಹೇಳಿದ ನೈತಿಕ ಸೂತ್ರಗಳನ್ನೂ ಮರೆಯಲಾರರೆಂಬ ಸೂಕ್ಷ್ಮವು ಇಲ್ವಲನಿಗೆ ಗೊತ್ತಾಯಿತು. ತಾಂತ್ರಿಕ ವಿದ್ಯೆಯನ್ನು ಪ್ರಯೋಗಿಸಿ ಜನರಿಗೆ ಮದ್ಯಪಾನೀಯಗಳ ಚಟ ಅಂಟಿಸಿದನು. ಅಗಸ್ತ್ಯನ ನೀತಿವಾಕ್ಯಗಳ ಫಲಕಗಳನ್ನು ಕೀಳಿಸಿ, ಹೊಸ ಹೊಸ ಸೂತ್ರಗಳನ್ನು ಬೋಧಿಸಿದನು. ಒಬ್ಬರನ್ನೊಬ್ಬರು ದೋಚಿಕೊಳ್ಳುವುದರಲ್ಲಿರುವ ಆನಂದ ವಿಶೇಷಗಳನ್ನು ಪ್ರಚಾರ ಮಾಡಿದನು. ಹಳೆಯ ಸುಖಗಳನ್ನೇ ನಂಬಿ ಕುಳಿತುಕೊಳ್ಳುವುದು ಮನುಷ್ಯತ್ವವಲ್ಲವೆಂದೂ, ಹೊಸಹೊಸ ಸುಖಗಳನ್ನು ತಿಳಿದುಕೊಳ್ಳುವುದೇ ಜೀವಿಸುವುದೆಂಬ ಸಿದ್ಧಾಂತಕ್ಕೆ ಲಕ್ಷಣವೆಂದೂ ಪ್ರಜೆಗಳ ಬುದ್ಧಿಯನ್ನು ಚೆನ್ನಾಗಿ ತಿರುಗಿಸಿದನು. ಪ್ರಚ್ಛನ್ನ ವೇಷಗಳಿಂದ ಅನೇಕಮಂದಿ ಮಿತ್ರ ರಾಕ್ಷಸರು ಇಲ್ವಲನ ಜತೆಗೆ ಕೂಡಿದರು. ಪ್ರಜಾಸೇವಕನಾಗಿ ಅವತರಿಸಿ, ಪ್ರಜಾನಾಯಕನಾಗಿ ಮೇಲೇರಿದ ಇಲ್ವಲನು ಮಹಾನಾಯಕನಾಗಿ ಪ್ರಜೆಗಳ ಮೇಲೆ ಸವಾರಿ ಮಾಡುತ್ತ ಪ್ರಜೆಗಳಿಗೊಂದು ಅಂಕುಶದಂತಾದನು. ಅಂತಃಕಲಹಗಳನ್ನು ಎಬ್ಬಿಸಿದನು.



ವಾತಾಪಿ ನಗರವು ಪರಸ್ಪರ ಜಗಳಾಟ ಹೊಡೆದಾಟಗಳಿಂದ ತುಂಬಿತು. ದುಷ್ಟರು ಸಾಧುಗಳನ್ನು ಬೇಟೆಯಾಡತೊಡಗಿದರು. ನಗರವು ಅಲ್ಲಕಲ್ಲೋಲವಾಯಿತು. ಅನೇಕಮಂದಿ ಸಾಧು ಪ್ರಜೆಗಳು ಭಯದಿಂದ ಇರಲಾಗದೆ, ನೆಮ್ಮದಿಯನ್ನು ಅರಸಿಕೊಂಡು ನಗರವನ್ನು ಬಿಟ್ಟು ಹೋಗಲಿಕ್ಕೂ ತೊಡಗಿದರು.

ಇಲ್ವಲನು ನಗರದ ಮಧ್ಯದಲ್ಲಿದ್ದ ವಿಘ್ನೇಶ್ವರನ ಮಹಾಶಿಲ್ಪವನ್ನು ನೆಲಮಟ್ಟ ಮಾಡಬೇಕೆಂಬ ಪ್ರಯತ್ನಕ್ಕೆ ಪ್ರಾರಂಭಿಸಿದನು. ಶತಘ್ನಿಯನ್ನು ತಯಾರಿಸಿ ತಂದು ಅದರ ಸುತ್ತಲೂ ಗುರಿಯಿಡಿಸಿದನು. ಶಿಲ್ಪದ ಅಡಿಯಲ್ಲಿ ಸಿಡಿಮದ್ದುಗಳನ್ನು ಜಡಿಸಿ ಇನ್ನೇನು ಬೆಂಕಿ ತಾಗಿಸಬೇಕೆಂದಿರುವಾಗ ಅತಿವಿಚಿತ್ರವಾದೊಂದು ಅದ್ಭುತವೇ ನಡೆಯಿತು. ಬೆಂಕಿ ತಗಲುವುದಕ್ಕೆ ಮೊದಲೇ ಮದ್ದುಗಳು ಸಿಡಿದುವು. ಆ ಅದುರುವಿಕೆಯಿಂದ ಶತಘ್ನಿ ಶಕಟ



ಗಳು ಅತ್ತಿಂದಿತ್ತ ತಿರುಗಿ ಸಿಡಿಯುತೊಡಗಿ ಗುಂಡುಗಳ ಮಳೆಯೇ ಸುತ್ತಲೂ ಹಾರಿದುವು. ಆ ಅಗ್ನಿ ವರ್ಷಣದಿಂದ ದುಷ್ಟರೆಲ್ಲಾ ಸತ್ತು ಸತ್ತು ಬಿದ್ದರು. ಅನೇಕರು ವಿಕಲಾಂಗರಾದರು. ಅಂಥವರಲ್ಲಿ ಇಲ್ವಲನೂ ಒಬ್ಬನು. ಇಲ್ವಲನಿಗೆ ಒಂದು ಕಾಲೂ ಒಂದು ಕೈಯೂ ಹೋದುವು.

ರಕ್ತಸಿಕ್ತವಾದ ಶರೀರದಿಂದ ಅವನು ನೆಲದಲ್ಲಿ ಬಿದ್ದು ಜೀವದೊಂದಿಗೆ ನರಳುತ್ತ ಹೊರಳಾಡಿ ಕೊಂಡಿರುವಾಗ, ಗಣಪತಿ ವಿಗ್ರಹದೊಳಗಿನಿಂದ ಈ ಮಾತುಗಳು ಕೇಳಿದುವು :

"ಎಲೋ ಇಲ್ವಲಾ! ಹೀಗೆಯೇ ಅಂಗ ವೈಕಲ್ಯತೆಯಿಂದ. ವಾರ್ಧಕ್ಯದಲ್ಲಿ ನರಳಿ ನರಳಿ ಕೊಳೆತು ಇನ್ನೂ ಇಷ್ಟು ಕಾಲ ಜೀವಿಸಿಕೊಂಡಿರು. ನಿನಗೆ ಅದೇ ಸರಿಯಾದ ಶಿಕ್ಷೆ."

ವಿಘ್ನೇಶ್ವರನ ಈ ಶಾಪ ವಾಕ್ಯಗಳು ಅವನ ಕಿವಿಗಳೊಳಗೆ ಚೆನ್ನಾಗಿ ಅಚ್ಚೊತ್ತಿದುವು. ಅಲ್ಲಿಗೆ ವಾತಾಪಿ ನಗರವು ಪೂರ್ವದ ವೈಭವವನ್ನು ಪೂರ್ತಿ ಕಳೆದುಕೊಂಡು, ಕೆಲವೇ ಮಂದಿ ಬಿಡಿಯಾಳುಗಳಿಂದ ಜೀವ ಮಾತ್ರ ಹಿಡಿದುಕೊಂಡು ಹೀಗಾಗಿದೆ.

ಧೌಮ್ಯನು ಹೀಗೆ ಹೇಳಿ ಮುಗಿಸಿದ ಕೂಡಲೇ ಅರ್ಜುನನು ವಿಗ್ರಹದ ಕಡೆಗೆ ಮುಖ ತಿರುಗಿಸಿ ನೋಡಿದನು. ಆಶ್ಚರ್ಯದಿಂದ ಅವನ ಬಾಯಿ ಅರೆದೆರೆದಂತೆಯೇ ನಿಂತುಹೋಯಿತು. ವಿಘ್ನೇಶ್ವರ ಮಹಾಶಿಲ್ಪವು ಅಲ್ಲಿ ಕಾಣಲೇ ಇಲ್ಲ!

ಧೌಮ್ಯನು ಸ್ವಲ್ಪವೂ ಆಶ್ಚರ್ಯ ಪಡದೆ, "ಅರ್ಜುನಾ, ಆಶ್ಚರ್ಯ ಪಡಬೇಡ. ಮಹಾ ಶಿಲ್ಪವು ಅದೃಶ್ಯವಾಗಿ ಹೋಗುತ್ತದೆಂದು ಆಗಲೇ ಹೇಳಿದೆನಷ್ಟೆ?" ಎಂದನು.

ಆಗ ಸುತ್ತುಮುತ್ತಲಿನ ಮುಳ್ಳಿನ ಪೊದರುಗಳಾಚೆಯಿಂದ ತೀರಾ ಹಣ್ಣು ಹಣ್ಣು ಮುದುಕನಾದ ವಿಕೃತರೂಪದವನೊಬ್ಬನು, ಒಂದು ಕೈ, ಒಂದು ಕಾಲಿನಿಂದ ಶರೀರವನ್ನು ಎಳೆದುಕೊಳ್ಳುತ್ತಾ ಒಂದು ಕೆಟ್ಟದನಿಯಿಂದ ಅರಚಿ, ಮಹಾಶಿಲ್ಪವಿದ್ದ ಕಡೆಗೆ ಒಕ್ಕೈಯನ್ನು ಚಾಚಿ ವಂದಿಸುವಂತೆ ಮಾಡುತ್ತಾ, ಹಾಗೆಯೇ ಬಿದ್ದು ಪ್ರಾಣಬಿಟ್ಟನು.

ಅರ್ಜುನನು ಅವನನ್ನು ನೋಡಿ, "ಗುರುದೇವಾ! ಅವನೇ ಅಲ್ಲವೇ ರಾಕ್ಷಸ ಇಲ್ವಲ!" ಎಂದು ಕೇಳಿದನು.

"ಹೌದು. ಅವನ ಕಿರಾತ ಕೃತ್ಯಗಳಿಂದಲೇ ರಾಕ್ಷಸ ಶಕ್ತಿಯನ್ನು ಕೂಡಾ ಕಳೆದುಕೊಂಡು ಹೀಗಾದನು. ದುಷ್ಟರಿಗೆ ಒಂದುದಿನ ಹೀಗೆಯೇ ಆಗುತ್ತದೆ" ಎಂದನು ಧೌಮ್ಯ.

ಅನಂತರ ಅರ್ಜುನನು ತಡಮಾಡದೆ, ಅಣ್ಣನಾದ ಧರ್ಮರಾಜನನ್ನು ಕರೆದುಕೊಂಡು ಬರಲು ದೂತರನ್ನು ಹಸ್ತಿನಾವತಿಗೆ ಓಡಿಸಿದನು. ಅದರಂತೆ ಹಸ್ತಿನಾಪುರದಿಂದ, ಭೀಮ, ನಕುಲ, ಸಹ

ದೇವರನ್ನೂ, ಪರಿವಾರದವರನ್ನೂ ಕರೆದುಕೊಂಡು ಧರ್ಮರಾಜನು ವಾತಾಪಿ ನಗರಕ್ಕೆ ಬಂದನು.

ಆ ರಾತ್ರಿ ಧರ್ಮರಾಜನು ವಿಘ್ನೇಶ್ವರನ ಮಹಾ ಶಿಲ್ಪವು ಅಂತರ್ಧಾನವಾದ ಸ್ಥಳಕ್ಕೆ ಇದಿರಾಗಿ ಕುಳಿತುಕೊಂಡು, "ದೇವಾ! ನನ್ನ ತಮ್ಮನು ನಿನ್ನ ಮಹಾಶಿಲ್ಪವನ್ನು ನೋಡಿ ಧನ್ಯನಾದನು. ನನಗೂ ಆ ಭಾಗ್ಯವನ್ನು ಕರುಣಿಸಲಾರೆಯಾ? ನಿನ್ನ ಮಹನೀಯವಾದ ಶಿಲ್ಪವನ್ನು ಇನ್ನಾರು ಕೆತ್ತ ಬಲ್ಲರು? ಬೇಗದಲ್ಲೇ ನಿನ್ನ ವಿಗ್ರಹ ಪ್ರತಿಷ್ಠೆ ನಡೆಯುವ ಮಹಾಭಾಗ್ಯವನ್ನು ನನಗೆ ಕೊಡು ಮಹಾಗಣಪತೀ!" ಎಂದು ಕಣ್ಣು ಮುಚ್ಚಿ ವಿಘ್ನೇಶ್ವರನನ್ನು ಧ್ಯಾನಿಸುತ್ತಾ ಬೇಡಿಕೊಂಡನು.

ಆಗ ಅವನ ಕಿವಿಗಳಲ್ಲಿ "ಧರ್ಮಜಾ, ದೇವ ಶಿಲ್ಪಿ ವಿಶ್ವಕರ್ಮನೂ, ದಾನವಶಿಲ್ಪಿ ಮಯನೂ ಕೂಡಿ ಶಿಲ್ಪಿಗಳಾಗಿ ಬಂದು ವಿಗ್ರಹವನ್ನು ಕೆತ್ತಿ, ಕಡೆದು, ರೂಪಿಸಿಕೊಡುತ್ತಾರೆ. ವಿಗ್ರಹಪ್ರತಿಷ್ಠೆ ನಡೆದ ಕೂಡಲೇ ಯಾಗಾಶ್ವವು ಕದಲಿ ಹೊರಡು ತ್ತದೆ. ಅಮೇಲೆ ನಿನ್ನ ಅಶ್ವಮೇಧಯಾಗವು ಜಯಪ್ರದವಾಗಿ ನಡೆಯುತ್ತದೆ. ವಾತಾಪಿ ನಗರ ವನ್ನು ಪುನರುದ್ಧಾರಣ ಮಾಡು. ನಿನ್ನ ಪಾಂಡವ ಸಂತತಿಯವರಾದ ಚಂದ್ರವಂಶದ ರಾಜರು ಚಿರಕಾಲ ಈ ನಗರವನ್ನು ಪಾಲಿಸುತ್ತಾರೆ" ಎಂಬ ಮಾತುಗಳು ಕೇಳಿಸಿದುವು.

ಧರ್ಮರಾಜನು ಕಣ್ಣುಬಿಡಿಸಿ ನೋಡಿದಾಗ, ಇದಿರಿನಲ್ಲಿ ಮಹೋನ್ನತವಾದ ವಿಘ್ನೇಶ್ವರನ ಮಹಾಶಿಲ್ಪವು ದೇದೀಪ್ಯಮಾನವಾಗಿ ಕಾಣಿಸಿ, ಹಾಗೆಯೇ ಅಂತರ್ಧಾನವಾಗಿ ಹೋಯಿತು. ಧರ್ಮರಾಜನ ಸರ್ವಾಂಗವೂ ಆನಂದಪುಲಕಿತ ವಾಯಿತು. ಮರುದಿನ ಬೆಳಿಗ್ಗೆ ಬೆಳ್ಳಗಿನವನೊಬ್ಬನೂ, ಕರ್ರಗಿನವನೊಬ್ಬನೂ ಸಮೀಪದಲ್ಲಿ ಪೊದರುಗಳ ನಡುವಿನಲ್ಲಿದ್ದ ಸ್ಫಟಿಕ ಶಿಲೆಯನ್ನು ಪರೀಕ್ಷಿಸುತ್ತಿರು




ವುದು ಕಂಡಿತು. ಅವರು ಯಾರೆಂಬುದನ್ನು ಗ್ರಹಿಸಿ ಧರ್ಮರಾಜನು ಅವರಿಗೆ ವಂದನೆಗಳನ್ನರ್ಪಿಸಿ ಆದರಿಸಿ ಗೌರವಿಸಿದನು.

ಅವರಿಬ್ಬರೂ ಆ ಶಿಲೆಯನ್ನು ಕೀಳಲು ಪ್ರಯತ್ನಿಸುವಾಗ, ಆ ಸ್ಥಳದ ಅಡಿಯಲ್ಲಿ ದೊಡ್ಡ ದೊಂದು ನಿಧಿಯ ಭಂಡಾರವು ಸಿಕ್ಕಿತು. ಅದು ಇಲ್ವಲನು ಬಚ್ಚಿಟ್ಟ ಧನರಾಶಿಯಾಗಿತ್ತು. ಧನದ ಮೋಹವನ್ನು ಬಿಡದೆ ಅನುಭವಿಸಲಾಗದೆ ನರಳಿ ನರಳಿ ಇಲ್ವಲನು ಸತ್ತದ್ದು ಕೂಡಾ ಅಲ್ಲಿ ತಾನೇ! ಆದೀಗ ಸದ್ವಿನಿಯೋಗಕ್ಕೆ ಸಿಕ್ಕಿದಂತಾಯಿತು. ಧರ್ಮರಾಜನು ಆ ಧನವನ್ನು ವಾತಾಪಿ ನಗರದ ಅಭಿವೃದ್ಧಿಗಾಗಿಯೇ ವಿನಿಯೋಗಿಸಿದನು.

ಇಬ್ಬರು ಮಹಾ ಶಿಲ್ಪಿಗಳ ಕೈಗಳಿಂದ ವಿಘ್ನೇಶ್ವರನ ಮಹಾಶಿಲ್ಪವು ಸಿದ್ಧವಾಯಿತು. ಮೊದಲಿನ ಮಹಾ ಶಿಲ್ಪವು ಮಾಯವಾದ ಸ್ಥಳದಲ್ಲಿಯೇ ದೊಡ್ಡ ಆಲಯವೂ, ದೊಡ್ಡ ಮಂಟಪವೂ ತಯಾರಾದುವು.



ವಿಶ್ವಕರ್ಮನೂ ಮಯನೂ ಸೇರಿ, ಒಂದು ವಿಶೇಷ ರೀತಿಯ ಶಿಲ್ಪ ಸಾಂಪ್ರದಾಯವನ್ನು ಆರೀತಿಯಾಗಿ ಭೂಮಿಯಲ್ಲಿ ಸ್ಥಿರಗೊಳಿಸಿದರು. ಹೊಸ ಶಿಲ್ಪ ಸಾಂಪ್ರದಾಯಕ್ಕೆ ಅದು ನಾಂದಿಯಾಯಿತು. ಭರತವಂಶದವರಿಂದ ಸ್ಥಾಪಿತವಾದ ಅದು ಭಾರತೀಯ ಶಿಲ್ಪಕಲೆಯಾಗಿ ಹೆಸರು ಪಡೆಯಿತು. ಕಾಲಾನುಸಾರವಾಗಿ ಅದು ಪ್ರಖ್ಯಾತವಾಗಿ ವರ್ಧಿಸುತ್ತಾ ಚಿರಸ್ಥಾಯಿಯಾಯಿತು. ಗಣಪತಿ ಶಿಲ್ಪವೂ, ಆಲಯವೂ ಪೂರ್ತಿಯಾದ ಮೇಲೆ ಆ ಶಿಲ್ಪಿಗಳಿಬ್ಬರೂ ಹೇಗೆ ಬಂದರೋ ಹಾಗೆಯೇ ಅದೃಶ್ಯರಾದರು.

ಆಲಯದಲ್ಲಿ ಧರ್ಮರಾಜನಿಂದ ವಿಘ್ನೇಶ್ವರ ವಿಗ್ರಹ ಪ್ರತಿಷ್ಠೆ ನಡೆದ ಕೂಡಲೇ ಯಾಗಾಶ್ವವು ನಿಂತ ಸ್ಥಳದಿಂದ ದೌಡು ತೆಗೆದು ಓಡತೊಡಗಿತು. ಅರ್ಜುನನೂ, ಭೀಮನೂ ಸೈನ್ಯದೊಂದಿಗೆ ಅದರ ಒಂದೆ ಹೊರಟರು.

ಅಗಸ್ತ್ಯನು ಏರ್ಪಡಿಸಿದ ಪ್ರಜಾರಾಜ್ಯ ಪದ್ಧತಿಯನ್ನೇ ಧರ್ಮರಾಜನು, ವಾತಾಪಿ ನಗರದಲ್ಲಿ ಮತ್ತೆ ಏರ್ಪಡಿಸಿದನು. ಅದಕ್ಕೆ ಬೇಕಾದ ಹಾಗೆ ತಕ್ಕ ಶಾಸನಗಳನ್ನು ಮಾಡಿ ಅವರಿಗೆ ಒಪ್ಪಿಸಿ, ನಕುಲ ಸಹದೇವರೊಂದಿಗೆ ಹಿಂದಿರುಗಿ ಹಸ್ತಿನಾಪುರಕ್ಕೆ ಹೊರಟುಹೋದನು.

ಪ್ರಜಾರಾಜ್ಯದ ಪರ್ಯಾಯ ಪದವಾಗಿ ಆ ಪ್ರಾಂತಕ್ಕೆ ಅಗಸ್ತ್ಯ ರಾಜ್ಯವೆಂದೂ, ನಗರಕ್ಕೆ ಅಗಸ್ತ್ಯ ನಗರವೆಂದೂ ಸ್ವಲ್ಪ ಕಾಲದವರೆಗೆ ಪ್ರಚಾರದಲ್ಲಿತ್ತು. ಕಾಲಕ್ರಮದಲ್ಲಿ ವಾತಾಪಿ ನಗರವೆಂಬ ಹೆಸರೇ ಸ್ಥಿರವಾಗಿ ಉಳಿಯಿತು.

ಅರ್ಜುನನು ದಿಗ್ವಿಜಯವನ್ನು ಮುಗಿಸಿಕೊಂಡು ಕುದುರೆಯೊಂದಿಗೆ ಹಸ್ತಿನಾಪುರವನ್ನು ತಲಪಿದನು. ಧರ್ಮರಾಜನ ಅಶ್ವಮೇಧಯಾಗವು ಮಹಾ ಘನವಾಗಿ ನಡೆಯಿತು. ಧರ್ಮರಾಜನು ಯಾಗ ಭಾಗಗಳನ್ನು ವಿಶ್ವಕರ್ಮನಿಗೂ, ಮಯನಿಗೂ ಪ್ರತ್ಯೇಕವಾಗಿ ಸಮರ್ಪಿಸಿದನು. ಶಿಲ್ಪಿಗಳಿಗೆಲ್ಲಾ ಗೌರವ ಪ್ರಪತ್ರಿಗಳನ್ನು ಏರ್ಪಡಿಸಿದನು.

ಧರ್ಮರಾಜನ ಅನಂತರ ಪರೀಕ್ಷಿತನೂ, ಪರೀಕ್ಷಿತನ ತರುವಾಯ ಜನಮೇಜಯನೂ ರಾಜ್ಯಪಾಲನೆ ಮಾಡಿದರು. ಜನಮೇಜಯನ ಸಂತತಿಯುವರಾದ ರಾಜರ ವಶಕ್ಕೆ ತಾನಾಗಿಯೇ ವಾತಾಪಿ ನಗರವು ಬಂದಿತು. ವಾತಾಪಿ ನಗರವನ್ನು ಪಾಲಿಸಿದ ಚಂದ್ರ ವಂಶದ ರಾಜರಲ್ಲಿ ಶತ್ರುಂಜಯನು ದೊಡ್ಡ ಸಾಮ್ರಾಜ್ಯ ಪಿಪಾಸಿಯಾಗಿದ್ದನು. ಅವನು ವಾತಾಪಿ ನಗರವನ್ನು ರಾಜಧಾನಿಯಾಗಿ ಮಾಡಿಕೊಂಡು, ವಾತಾಪಿ ಸಾಮ್ರಾಜ್ಯವನ್ನು ಸ್ಥಾಪಿಸಿ ದೊಡ್ಡ ರಾಜನೆನಿಸಿದನು. ಸೈನ್ಯವನ್ನು ಬೆಳೆಯಿಸಲಿಕ್ಕಾಗಿ ಪ್ರಜೆಗಳ ಮೇಲೆ ತೆರಿಗೆಗಳನ್ನು ಹಾಕಿದನು. ಅವನು ನಿರಂಕುಶ ಪ್ರಭುತ್ವವನ್ನು ಚಲಾಯಿಸುತ್ತ, ಇಲ್ವಲನು ಮತ್ತೆ ಹುಟ್ಟಿದನೋ ಅನಿಸುವಂತಿದ್ದನು.

ಅವನ ಕುಮಾರರಲ್ಲಿ ಚಳುಕವರ್ಮನೆಂಬುವನು ತುಂಬಾ ಒಳ್ಳೆಯವನಾಗಿದ್ದನು. ಅಗಸ್ತ್ಯನ ಪ್ರಜಾ ರಾಜ್ಯ ಸೂತ್ರಗಳ ಮೇಲೆ ಅವನಿಗೆ ಒಳ್ಳೆಯ ಗುರಿಯಿದ್ದಿತು. ಅವನು ವಿಘ್ನೇಶ್ವರನನ್ನು ಭಕ್ತಿಯಿಂದ ಆರಾಧಿಸುತ್ತ, ವಿದ್ಯಾರ್ಜನೆಯಲ್ಲಿಯೂ, ಲಲಿತಕಲೆ, ಶಿಲ್ಪ ಕಲೆಗಳ ಮೇಲೆಯೂ ಮನಸ್ಸುಳ್ಳವನಾಗಿದ್ದನು. ಅಗಸ್ತ್ಯನ ಅಂಶವೇ ಅವನಲ್ಲಿ ಇರುವುದೆಂದು ಜನರು ಹೇಳಿ ಕೊಳ್ಳುತ್ತಿದ್ದರು.

ಸಾಮ್ರಾಜ್ಯವನ್ನು ವಿಸ್ತರಿಸಲಿಕ್ಕಾಗಿ ಶತ್ರುಂಜಯನು ತನ್ನ ಕುಮಾರರಿಗೆ ಆಜ್ಞೆಗಳನ್ನು ಮಾಡಿದನು. ಆಗ ಚಳುಕನು ತಂದೆಯೊಂದಿಗೆ, "ಜನರಿಗೆ ಹಿಂಸೆ ಕೊಡುವುದೂ, ಪರರನ್ನು ಪೀಡಿಸುವುದೂ ಏನೇನೂ ಚೆನ್ನಾಗಿಲ್ಲ. ಈರೀತಿಯಾಗಿ ಸಾಮ್ರಾಜ್ಯ ವಿಸ್ತರಣೆ ಮಾಡುವುದಕ್ಕೂ, ಚಾಂಡಾಲ ವೃತ್ತಿಗೂ ಏನು ವ್ಯತ್ಯಾಸವಿದೆ ? ಇಂತಹ ನೀಚಕಾರ್ಯಗಳಿಗೆ ನಾನಿಲ್ಲ" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿ, ಅಣ್ಣಂದಿರೊಂದಿಗೆ ಸೈನ್ಯ ತೆಗೆದುಕೊಂಡು ಹೋಗಲು ನಿರಾಕರಿಸಿ ಬಿಟ್ಟನು !

ಶತ್ರುಂಜಯನು ಮಹಾ ಕೋಪದಿಂದ, "ಛೀ ಛೀ ! ಸಿಂಹದ ಹೊಟ್ಟೆಯಲ್ಲಿ ಇಲಿ ಹುಟ್ಟಿದಂತೆ ನೀನು ರಾಜವಂಶದಲ್ಲಿ ನನ್ನ ಮಗನಾಗಿ ಹುಟ್ಟಿದಿ ! ನಿನಗೆ ತಕ್ಕ ಶಾಸ್ತಿ ನಡೆಯಲೇಬೇಕು !" ಎಂದು ಒಂದು ಇಲಿಯನ್ನು ಹಿಡಿಸಿ ತರಿಸಿ, ಅದಕ್ಕೆ ಚುಳುಕಿ ಎಂದು ಹೆಸರಿಟ್ಟು, ಅದರೊಂದಿಗೆ ಚಳುಕ ವರ್ಮನಿಗೆ ಮದುವೆ ಮಾಡುವೆನೆಂದು ಡಂಗುರು ಹೊಡೆಸಿ ಎಲ್ಲರನ್ನೂ ಆಹ್ವಾನಿಸಿದನು.

ಚುಳುಕಿ ಎಂಬ ಆ ಇಲಿ "ಕಲ್ಯಾಣ ಕಿಂಕಿಣಿ" ಎಂಬ ಅಪ್ಸರಸಿ. ಇಂದ್ರನ ಶಾಪದಿಂದ ಇಲಿಯಾಗಿ ಭೂಮಿಯಲ್ಲಿ ಬಿದ್ದಿದ್ದಳು.

ಕಲ್ಯಾಣ ವೇದಿಕೆಯ ಮೇಲೆ ಅಲಂಕರಿಸಲ್ಪಟ್ಟ ಹಸೆಮಣೆಯ ಮೇಲೆ ಕುಳಿತಿದ್ದ ರಾಜಕುಮಾರನನ್ನೂ, ಇಲಿಯನ್ನೂ ನೋಡಿ ಎಲ್ಲರೂ ಮಾಡುವ ಪರಿಹಾಸದ ಕೋಲಾಹಲಕ್ಕೆ, ಚಳುಕವರ್ಮನು ನಾಚಿ ನೀರಾಗಿ ಹೋಗಬೇಕೆಂದೇ, ಶತ್ರುಂಜಯನು ಈ ವಿಚಿತ್ರ ವಿವಾಹಕ್ಕೆ ಎಲ್ಲಾ ರಾಜರನ್ನೂ ಪ್ರಜೆಗಳನ್ನೂ ಆಹ್ವಾನಿಸಿದ್ದನು.

ಆದರೆ ಚಳುಕವರ್ಮನು ಮಂದಹಾಸದಿಂದ, "ಇಲಿಯನ್ನು ಮಹಾರಾಜನ ಸೊಸೆಯಾಗಿ ಮಾಡಿಸಬಲ್ಲವನಾದ ನನ್ನ ಆರಾಧ್ಯದೇವ ಮೂಷಿಕ ವಾಹನ ವಿಘ್ನೇಶ್ವರನು, ಈ ಇಲಿಯನ್ನು ಕೋಕಿಲ ವಾಣಿಯಂತಹ ಕನ್ಯೆಯಾಗಿ ಮಾಡಲಾರನೆಂದು ಇಲ್ಲಿ ಯಾರೂ ನಂಬದಿದ್ದರೂ, ನಾನು ಗಟ್ಟಿಯಾಗಿ ನಂಬುತ್ತೇನೆ" ಎಂದನು.





# ಗಂಧರ್ವೇಂದ್ರನ ಮಗಳು

೮

ವೃದ್ಧನು ಹೇಳಿದ ಮಾತು ಕೇಳಿ ಹಸನ್ ಮತ್ತಷ್ಟು ದುಃಖಪಡುತ್ತ, ಅತಿ ದೀನನಾಗಿ ಅವನ ಕಾಲಿಗೆ ಬಿದ್ದು ತನಗೆ ಹೆಂಡತಿಯನ್ನೂ, ಮಕ್ಕಳನ್ನೂ ದಾನ ಮಾಡಬೇಕೆಂದು ಪ್ರಾರ್ಥಿಸಿದನು.

"ಸಾಯಲಿಕ್ಕೆ ನಿನ್ನ ಹಾಗೆ ಆತುರಪಡುವವನನ್ನು ನಾನು ಇದುವರೆಗೂ ನೋಡಲಿಲ್ಲ. ನೀನು ತಲೆ ಹಾಕಿದ ಕಾರ್ಯ ಎಷ್ಟೊಂದು ಪ್ರಾಣಾಪಾಯದ್ದೆಂದು ಇನ್ನೂ ನಿನಗೆ ಸ್ವಲ್ಪ ಕೂಡಾ ಗೊತ್ತಾಗಲಿಲ್ಲವೇ? ಆದರೂ ನನ್ನ ಕೈಯಲ್ಲಿರುವ ಸಹಾಯ ಅಷ್ಟು ಮಾಡಿಬಿಡುತ್ತೇನೆ. ನಿನ್ನ ಹಣೇ ಬರಹದಂತಾಗುತ್ತೆ" ಎಂದು ಹೇಳಿ ವೃದ್ಧನು ತನ್ನ ಗಡ್ಡದಿಂದ ಕೆಲವು ಕೂದಲುಗಳನ್ನು ಕಿತ್ತು, ಹಸನ್ನನಿಗೆ ಕೊಟ್ಟು, "ಎಲ್ಲಕ್ಕಿಂತಲೂ ದೊಡ್ಡ ಅಪಾಯ ಬಂದು, ನಿನ್ನ ಪ್ರಾಣದ ಮೇಲೆ ಬರುತ್ತದೆ ಅನ್ನುವಾಗ ಈ ಕೂದಲಿನಲ್ಲಿ ಒಂದನ್ನು ತೆಗೆದು ಕೈಯಲ್ಲಿ ತಿಕ್ಕು. ಇದು ಸುಟ್ಟು ಹೋಗುತ್ತದೆ. ನಾನು ಆ ಕ್ಷಣವೇ ಬಂದು ನಿನಗೆ ಸಹಾಯ ಮಾಡುತ್ತೇನೆ. ಆದರೆ ಅಷ್ಟರ ವರೆಗೆ ನೀನು ಬದುಕಿರುವಿ" ಎಂಬ ನಂಬುಗೆ ನನಗಾಗುವುದಿಲ್ಲ. ಹುಂ, ನೋಡೋಣ." ಎಂದನು.

ತರುವಾಯ ವೃದ್ಧನು ತಲೆಯೆತ್ತಿ ಮೇಲೆ ನೋಡಿ ಚಪ್ಪಾಳೆ ತಟ್ಟಿದನು. ಕೂಡಲೇ ಒಂದು ಭೂತವು ಅವರ ಇದಿನಲ್ಲಿ ಪ್ರತ್ಯಕ್ಷವಾಯಿತು. ವೃದ್ಧನು ಹಸನ್ನನ್ನು ನೋಡಿ, "ನೀನು ಇವನ ಬೆನ್ನ ಮೇಲೆ ಸವಾರಿಯಾಗಿ ಹೋಗು. ಇವನು ನಿನ್ನನ್ನು ಕರ್ಪೂರದ್ವೀಪದಲ್ಲಿ ಇಳಿಸುತ್ತಾನೆ. ಆಮೇಲೆ ನಿನ್ನ ದಾರಿ ನೀನೇ ನೋಡಿಕೊಳ್ಳಬೇಕು. ಕರ್ಪೂರ ದ್ವೀಪವನ್ನು ಕಳೆದು ಆಚೆಯ ಕೊನೆಗೆ ಹೋದರೆ, ವಾಕ್ ವಾಕ್ ದ್ವೀಪಗಳಿರುವ ಸಮುದ್ರದ ಈಚೆಯ ತೀರವನ್ನು ತಲಪುವಿ. ಆಮೇಲೆ ಭಗವಂತನ ಕೈಯಲ್ಲೇ ಇದೆ ಎಲ್ಲವೂ!" ಎಂದನು.

ಹಸನ್ ಆ ವೃದ್ಧನಿಗೂ ಉಳಿದವರಿಗೂ ನಮಸ್ಕಾರ ಮಾಡಿ ದೊಡ್ಡ ಭೂತದ ಬೆನ್ನಿನ ಮೇಲೆ ಏರಿ ಕುಳಿತುಕೊಂಡನು.

ಭೂತವು ಆಕಾಶಮಾರ್ಗದಲ್ಲಿ ಪ್ರಯಾಣ ಮಾಡಿ ಅವನನ್ನು ಕರ್ಪೂರ ದ್ವೀಪದಲ್ಲಿ ಇಳಿಸಿ ತನ್ನ ಪಾಡಿಗೆ ಹೊರಟುಹೋಯಿತು. ಜಗಜಗವೆಂದು ಹೊಳೆಯುತ್ತ



1—B



ಸುವಾಸನೆಯನ್ನು ಹರಡಿಕೊಂಡಿರುವ ಆ ದ್ವೀಪದ ಮೇಲೆ ಹಸನ್ ನಡೆಯಲು ತೊಡಗಿದನು. ಸ್ವಲ್ಪ ದೂರ ಹೋದಾಗ, ಮುಂದೆ ತುಸು ದೂರದಲ್ಲಿ ಒಂದು ಗುಡಾರವಿರುವಂತೆ ಕಂಡಿತು. ಎತ್ತರವಾದ ಹುಲ್ಲುಗಳ ನಡುವೆ ಅವನು ಆ ಗುಡಾರವನ್ನೇ ನೋಡುತ್ತ ನಡೆಯುತ್ತಿರಲು, ಕಾಲಿಗೇನೋ ತಗಲಿ ಮುಗ್ಗುರಿಸಿಬಿದ್ದನು. ತನಗೆ ತಗಲಿದ್ದು ಯಾವುದೋ ಕದಲುವ ಪ್ರಾಣಿ ಎಂದು ತಿಳಿದು ತುಂಬಾ ಗಾಬರಿಯಾದನು.

ಹಸನ್ನನ ಕಾಲಿಗೆ ತಗಲಿದ್ದು ಮಹಾಕಾಯನೊಬ್ಬನ ಬೆರಳು. ಗುಡಾರದ ಹಾಗೆ ಕಂಡದ್ದೇ ಅವನ ಕಿವಿ. ಆ ಮಹಾಕಾಯನು ಕೈಗಳನ್ನು ಚಾಚಿಕೊಂಡು ಹುಲ್ಲಿನ ನಡುವೆ ಮಲಗಿ ನಿದ್ರಿಸುತ್ತಿದ್ದವನು, ಹಸನ್ ತನ್ನ ಮೇಲೆ ಬಿದ್ದ ಕೂಡಲೇ ಭೂಮಿ ಒಡೆಯುವ ಹಾಗೆ ಆರ್ಭಟಿಸುತ್ತ, ದೊಡ್ಡ ತಾಳೇ ಮರದ ಪ್ರಮಾಣಕ್ಕೆ ಎದ್ದು ನಿಂತನು. ಕಣ್ಣು ಮುಚ್ಚಿ ಬಿಡಿಸುವುದೊಳಗೆ ಅವನು ಹಸನ್ನನ್ನು ಹಕ್ಕಿಯನ್ನು ಹಿಡಿದ ಹಾಗೆ ಹಿಡಿದುಕೊಂಡು ಮೇಲೆತ್ತಿದನು. ತನ್ನ ಗತಿ ಇಲ್ಲಿಗೆ ಮುಗಿಯಿತೆಂದುಕೊಂಡನು ಹಸನ್.

ಹಸನ್ ಭೀತಿಯಿಂದ ತಟಪಟನೆ ತುಳ್ಳುತ್ತ, "ಅಯ್ಯೋ! ರಕ್ಷಿಸಿರಿ! ಕಾಪಾಡಿರಿ!" ಎಂದು ಗಟ್ಟಿಯಾಗಿ ಕೂಗಿದನು.

"ಈ ಹಕ್ಕಿ ವಿಚಿತ್ರವಾಗಿ ಕೂಗುತ್ತದಲ್ಲಾ! ಹೊಸಬಗೆಯ ಹಕ್ಕಿಯಾಗಿದೆ! ಕೊಕ್ಕಿಲ್ಲದ ವಿಚಿತ್ರ ಹಕ್ಕಿ! ಇದನ್ನು ನಮ್ಮ ಮಹಾರಾಜರಿಗೆ ಬಹುಮಾನ ಕೊಡುತ್ತೇನೆ" ಎಂದು ಹೇಳಿಕೊಂಡನು ಆ ಮಹಾಕಾಯ.

ಕರ್ಪೂರ ದ್ವೀಪದ ರಾಜನು ಒಂದು ಬಂಡೆಗಲ್ಲಿನ ಮೇಲೆ ಕುಳಿತುಕೊಂಡಿದ್ದನು. ಅವನು ಕೂಡಾ ಹಸನ್ನನ್ನು ನೋಡಿ ಯಾವುದೋ ಹಕ್ಕಿ ಎಂದೇ ತಿಳಿದುಕೊಂಡು, "ರಕ್ಷಿಸಿರಿ! ಕಾಪಾಡಿರಿ!" ಎಂದು ಅವನು ಕೂಗುವುದನ್ನು ಕೂಡಾ ಹಕ್ಕಿಯ ಅರಚಾಟವೆಂದೇ ಭಾವಿಸಿ ಬಹಳ ಹೊತ್ತು ರಸಿಸಿ, ಮೆಚ್ಚಿ ತಲೆದೂಗಿದನು. ಆಮೇಲೆ ಒಂದು ಪಂಜರದಲ್ಲಿ ಹಸನ್ನನ್ನು ಇಟ್ಟು, ಅವನಿಗೆ ನೀರನ್ನೂ ಆಹಾರವನ್ನೂ ಆ ಪಂಜರದಲ್ಲೇ ಏರ್ಪಡಿಸಿ ತನ್ನ ಭಾರಿಯಾದ ಮನೆಯ ಮುಂದೆ ಆ ಪಂಜರವನ್ನು ನೇತಾಡಿಸಿಟ್ಟನು. ದಿನಾ ಸ್ವಲ್ಪ ಹೊತ್ತು ಹಸನ್ನನ ನರಳಾಟ ನೋಡಿ ಆನಂದಿಸುತ್ತಿದ್ದನು ಆ ರಾಜ.

ದಿನಗಳು ಕಳೆಯುತ್ತಿದ್ದುವು, ಹಸನ್ ಆ ಪಂಜರದಲ್ಲಿ ಸಿಕ್ಕಿಕೊಂಡು ಬೇಸರದಿಂದ ಸೊರಗತೊಡಗಿದನು. ಹೀಗೆಯೇ ತಾನು ಸಾಯುವೆನೆಂಬ ಭೀತಿ ಅವನಿಗೆ ಹಿಡಿಯಿತು.

ಆ ಸ್ಥಿತಿಯಲ್ಲಿ ಅವನಿಗೆ ವೃದ್ಧನು ಕೊಟ್ಟ ಗಡ್ಡದ ಕೂದಲಿನ ನೆನಪಾಯಿತು. ರಾಜನ ಮಗಳು ಅವನನ್ನು ಆಡಿಸಲು ಪಂಜರದಿಂದ ಹೊರಗೆ ತೆಗೆದು ಸ್ವಲ್ಪ ಹೊತ್ತು ಆಟವಾಡಿಸುವಳು. ಈಗ ಅವನು ಅವಳಿಗೆ

ಹೊಂಚಿ ಹುಡುಕುವ ಆಟವನ್ನು ತೋರಿಸುತ್ತ, ಉಪಾಯವಾಗಿ ಅವಳ ಪಟ್ಟಿನಿಂದ ತಪ್ಪಿಸಿಕೊಂಡು ಹೋಗಿ, ಒಂದು ಕೂದಲನ್ನು ತೆಗೆದು ತಿಕ್ಕಿ ಉರಿಸಿದನು.

ಆ ಕ್ಷಣದಲ್ಲಿ ವೃದ್ಧನು ಅವನ ಮುಂದೆ ಪ್ರತ್ಯಕ್ಷನಾಗಿ, "ಏನು ಬೇಕು ಹಸನ್? ಇವತ್ತಿನ ವರೆಗೆ ಬದುಕಿರುವೆಯಾ? ಅಷ್ಟರಮಟ್ಟಿಗೆ ಅದೃಷ್ಟ ವಂತ!" ಎಂದು ಹೇಳಿದನು.

"ನನ್ನನ್ನು ಈ ಬಂಧನದಿಂದ ಬೇರೆಲ್ಲಿಗಾದರೂ ಸೇರಿಸಿ ಬಿಡಿರಿ! ಇನ್ನೊಂದು ದಿನ ಇಲ್ಲಿದ್ದರೆ ನನ್ನ ಪ್ರಾಣ ಉಳಿಯುವುದಿಲ್ಲ. ನೀವೇ ಗತಿ!" ಎಂದನು ದೀನನಾಗಿ.

"ನಾನು ಹೇಳಲಿಲ್ಲವೇನಪ್ಪಾ? ಇನ್ನೂ ನಿನ್ನ ಕಷ್ಟಗಳು ಸಾಸಿವೆಯ ಅರ್ಧದಷ್ಟೂ ಆಗಿಲ್ಲ. ಇಲ್ಲಿ ಏನೋ ನನ್ನ ಕೂದಲನ್ನು ಸುಟ್ಟು ನನ್ನನ್ನು ಕರೆಯಲು ಸಾಧ್ಯವಾಯಿತು. ವಾಕ್ ವಾಕ್ ದ್ವೀಪಗಳಲ್ಲಿ ಯಾವ ಮಂತ್ರಗಳೂ ಪ್ರಭಾವ ಬೀರವು. ಅಲ್ಲಿ ನಿನಗೆ ಭಗವಂತನೇ ದಿಕ್ಕು. ನಿನ್ನ ಈ ಪ್ರಯತ್ನವನ್ನು ಎಂದೋ ಬಿಟ್ಟಿರ ಬೇಕಿತ್ತು" ಎಂದನು ವೃದ್ಧ.

"ಅಯ್ಯಾ, ನನ್ನ ಪ್ರಯತ್ನದಲ್ಲಿ ಸತ್ತರೆ ಸಾಯುತ್ತೇನೆಯೇ ಹೊರತು, ಇಲ್ಲೇ ಸಿಕ್ಕಿಕೊಂಡು ಹೇಗೆ ಸಾಯಲಿ? ನನ್ನ ಹಣೆಯಲ್ಲಿ ಯಾವಾಗ ಸಾವು ಬರೆದಿದೆಯೋ ಆಗಲೇ ಬರುತ್ತೆ, ಬರಲಿ! ಅದಕ್ಕಾಗಿ ನನ್ನ ಹೆಂಡತಿಯನ್ನು ಹುಡುಕದಿರಲು ಸಾಧ್ಯವೇ? ದಯ ಮಾಡಿ ನನಗೆ ಮುಂದಿನ ದಾರಿಯೊಂದು ತೋರಿಸಿ ಬಿಡಿರಿ." ಎಂದನು ಹಸನ್.

ವೃದ್ಧನು ಹಸನ್ನನ ಕೈ ಹಿಡಿದುಕೊಂಡು, "ನಿನ್ನ ಕಣ್ಣುಗಳನ್ನು ಒಂದು ಸಾರಿ ಮುಚ್ಚಿಕೊ" ಎಂದನು. ಹಸನ್ ಕಣ್ಣು ಮುಚ್ಚಿದನು. ವೃದ್ಧನು ಅವನನ್ನೆತ್ತಿದ ಹಾಗಾಯಿತು. ಮತ್ತೊಂದು ಕ್ಷಣದಲ್ಲಿ ಅವನು ಕೈ ಬಿಟ್ಟ ಹಾಗಾಗಿ ಕಣ್ಣು ಬಿಡಿಸಿದಾಗ, ಅವನು ಒಂದು



ಸಮುದ್ರದ ತೀರದಲ್ಲಿ ನಿಂತಿದ್ದನು. ಆ ತೀರದ ನೆಲ ದಲ್ಲೆಲ್ಲಾ ಅನೇಕ ಬಣ್ಣಗಳ ರತ್ನಗಳು ಹೊಳೆಯು ತ್ತಿದ್ದುವು!

ಅವನು ತಲೆ ತಿರುಗಿಸುತ್ತ ನೋಡುತ್ತಿರಲು, ಸಮುದ್ರದ ತೀರದಲ್ಲಿದ್ದ ಪರ್ವತಗಳ ಮೇಲಿನಿಂದ ದೊಡ್ಡ ದೊಡ್ಡ ಆಕಾರದ ಪಕ್ಷಿಗಳು "ವಾಕ್ ವಾಕ್!" ಎಂದು ಕೂಗುತ್ತ ಆಕಾಶಕ್ಕೆ ತೂಗು ಹಾಕುವ ದೀಪಗಳಂತೆ ಮೇಲೆದ್ದುವು.

ತಾನು ಈಗ ವಾಕ್ ವಾಕ್ ದ್ವೀಪಗಳನ್ನೇ ಸೇರಿದ್ದೇನೆಂದು ಹಸನ್ನನಿಗೆ ಗೊತ್ತಾಯಿತು. ಈ ಪಕ್ಷಿ ಗಳು ತನ್ನನ್ನು ಸಮುದ್ರದೊಳಗೆ ದೂಡಿ ಬಿಡುವುದ ರೊಳಗೆ ಎಲ್ಲಿಯಾದರೂ ಅಡಗಿಕೊಳ್ಳಬೇಕೆಂದು ಅವನು ನೋಡುವಾಗ, ಅದೃಷ್ಟವಶದಿಂದ ಸಮೀಪ ದಲ್ಲಿ ಒಂದು ಗುಡಿಸಲಿರುವುದು ಕಂಡಿತು. ಅವನು ಓಡಿ ಹೋಗಿ ಅದರೊಳಗೆ ಹೊಕ್ಕು ಕುಳಿತನು. ಅಷ್ಟರಲ್ಲಿ ಭೂಮಿ ನಡುಗಿತು.



ದೂರದಲ್ಲಿ ಧೂಳಿ ಯೇಳುವುದನ್ನು ನೋಡಿದನು. ಆ ಧೂಳೀ ಮೇಘವು ಅವನಿರುವ ಗುಡಿಸಲಿನ ಕಡೆಗೇ ಬರುತ್ತಿದ್ದಿತು. ಆ ಧೂಳೀ ಮೇಘದ ಎಡೆಯಲ್ಲಿ ಮಿಂಚುಗಳ ಹಾಗೆ ಈಟಿಗಳ ಕೊನೆಗಳೂ, ಶಿರಸ್ತ್ರಾಣಗಳೂ, ಕವಚಗಳೂ ಕಾಣಿಸುತ್ತಾ ಬಂದುವು. ಹಾಗೆ ಬರುವವರು ಭಯಂಕರರಾದ ವೀರ ಯೋಧ ಕನ್ಯೆಯರೇ !

ಅವರು ದೊಡ್ಡ ದೊಡ್ಡ ಕುದುರೆಗಳ ಮೇಲೇರಿಕೊಂಡು ವಾಯುವೇಗದಿಂದ ಅವನಿರುವಲ್ಲಿಗೇ ಬಂದರು, ಅವರಿಂದ ತಪ್ಪಿಸಿಕೊಳ್ಳಲು ಹಸನ್ನನಿಗೆ ದಾರಿಯೇ ಇರಲಿಲ್ಲ. ಗುಡಿಸಲಿನ ಬಾಗಿಲ ಹೊರಗೆ ತುಸು ದೂರದಲ್ಲಿ ಅವರ ಕುದುರೆಗಳು ನಿಂತುವು. ಅವರಲ್ಲಿ ಒಬ್ಬಳೇ ತನ್ನ ಕುದುರೆಯನ್ನು ಹಸನ್ನನ ಬಳಿಗೇ ಮೆಲ್ಲನೆ ನಡೆಸಿಕೊಂಡು ಬಂದಳು. ಅವಳ ಮುಖಕ್ಕೆ ಕೂಡಾ ಕವಚವಿದ್ದುದರಿಂದ ಅವಳನ್ನು ನೋಡಲು ಹಸನ್ನನಿಗಾಗಲಿಲ್ಲ. ಅವಳು ಬಾಯಿ ತೆರೆದು ಮಾತಾಡುವುದಕ್ಕೆ ಮೊದಲೇ ಹಸನ್ ಅವಳ ಮುಂದೆ ನೆಲದಲ್ಲಿ ಸಾಷ್ಟಾಂಗವಾಗಿ ಬಿದ್ದು, "ಮಹಾದೇವೀ ! ನಾನು ವಿಧಿವಶವಾಗಿ ಈ ದ್ವೀಪಕ್ಕೆ ಬಂದು ಬಿದ್ದವನು. ನಿನಗೇ ಶರಣಾಗತನಾಗಿದ್ದೇನೆ. ಹೆಂಡತಿಯನ್ನೂ, ಮಕ್ಕಳನ್ನೂ ಹುಡುಕುತ್ತಾ ಬಂದಿರುವ ಈ ನಿರ್ಭಾಗ್ಯನ ಮೇಲೆ ದಯವಿಟ್ಟು. ನನಗೆ ಅಭಯ ನೀಡಬೇಕಮ್ಮಾ !" ಎಂದು ಬೇಡಿದನು.

ಅವಳು ತನ್ನ ಕುದುರೆಯಿಂದ ಕೆಳಗಿಳಿದು ಕೈಸನ್ನೆಯಿಂದ ತನ್ನ ಅನುಚರರೆಲ್ಲಾ ಹೊರಟು ಹೋಗುವಂತೆ ಸೂಚಿಸಿದಳು, ಅನಂತರ ಹಸನ್ನನ್ನು ಪರೀಕ್ಷಿಸಿ ನೋಡಿ, ತನ್ನ ಮುಖಕ್ಕೆ ಅಡ್ಡವಾಗಿದ್ದ ಕವಚ ಭಾಗವನ್ನು ತೊಲಗಿಸಿದಳು. ಅವಳ ಮುಖವನ್ನು ನೋಡಿ ಹಸನ್ ಹೆದರಿ ಕೆಟ್ಟದನಿಯಿಂದ ಕೂಗಿಕೊಂಡನು, ಯೋಧ ಕನ್ಯೆಯರೆಲ್ಲ ಬಹಳ ಅಂದವಾಗಿರುವರೆಂದು ಯಾರೋ ಹೇಳಿದ್ದರು. ಇವಳು ತುಂಬಾ ಮುದುಕಿ ಮಾತ್ರವಲ್ಲದೆ ವಿಕಾರರೂಪದಿಂದ ತನ್ನನ್ನು ನುಂಗುವಂಥ ಭಯಂಕರಳಾಗಿ ಕಂಡಳು.

ತನ್ನನ್ನು ನೋಡಿ ಹೆದರಿ ಹಸನ್ ಕೂಗಿ ಕಣ್ಣು ಮುಚ್ಚಿಕೊಂಡನೆಂದು ತಿಳಿಯದೆ, ಅದು ಅವನು ತನಗೆ ಕೊಡುವ ಮಹಾಗೌರವವೆಂದುಕೊಂಡು ಆ ಮುದುಕಿ, "ಹೆದರಬೇಡೆಲೋ ಅಪ್ಪಾ ! ನಿನ್ನನ್ನು ನಾನು ಕಾಪಾಡುತ್ತೇನೆ. ನಿನಗೆ ಬೇಕಾದ ಸಹಾಯವೆಲ್ಲಾ ಮಾಡುತ್ತೇನೆ. ಆದರೆ ನಿನ್ನನ್ನು ಮೊದಲು ಯಾರೂ ನೋಡದ ಹಾಗೆ ಮಾಡಬೇಕು. ಆದ್ದರಿಂದ ನಿನಗೆ ಯೋಧಕನ್ಯೆಯರ ದುಸ್ತು ತರಿಸಿ ಕೊಡುತ್ತೇನೆ. ಅವುಗಳನ್ನು ಧರಿಸಿಕೋ. ಆ ಮೇಲೆ ನಿನ್ನ ವೃತ್ತಾಂತವನ್ನೆಲ್ಲಾ ಸಾವಕಾಶವಾಗಿ ಕೇಳುತ್ತೇನೆ. ಪಾಪ, ಎಲ್ಲಿಂದ ಹೇಗೆ ಬಂದೆಯೋ ಏನೋ!" ಎಂದಳು.

ಅವಳು ಹೋಗಿ ಬಹುಬೇಗನೇ ತಿರುಗಿ ಬಂದು ಯೋಧ ಕನ್ಯೆಯರ ದುಸ್ತುಗಳನ್ನೂ, ಕವಚಗಳನ್ನೂ, ಆಯುಧಗಳನ್ನೂ ತಂದಳು. ಅವುಗಳನ್ನು ಧರಿಸಿ

ಕೊಂಡಾಗ ಹಸನ್ ಕೂಡಾ ಯೋಧ ಕನ್ಯೆಯಂತೆಯೇ ಆದನು. ಮುದುಕಿ ಅವನನ್ನು ಸಮುದ್ರ ತೀರದಲ್ಲಿದ್ದ ಒಂದು ಕಲ್ಲಿನ ಮೇಲೆ ಕುಳ್ಳಿರಿಸಿ, ತಾನೂ ಅವನ ಮುಂದೆ ಕುಳಿತು ಅವನ ಪೂರ್ತಿ ಕಥೆಯನ್ನು ಕೇಳಿದಳು. ಅವನ ಹೆಂಡತಿಯ ಹೆಸರನ್ನೂ, ಕುಮಾರರ ಹೆಸರನ್ನೂ ಕೇಳಿದಳು. "ಅವರನ್ನು ಇಲ್ಲಿ ಯಾವ ಹೆಸರಿನಿಂದ ಕರೆಯುತ್ತಾರೋ ತಿಳಿಯದು" ಎಂದನು.

ಆ ಮುದುಕಿಗೆ ಹಸನ್ನನ ಮೇಲೆ ಮಾತೃಪ್ರೇಮವೇ ಹುಟ್ಟಿತು. ಅವಳು ಅವನೊಂದಿಗೆ, "ಹಸನ್, ತಾಯಿ ತನ್ನ ಮಕ್ಕಳಿಗಾಗಿ ಏನೇನು ಮಾಡುವಳೋ ಅದನ್ನೆಲ್ಲಾ ನಾನು ನಿನಗೆ ಮಾಡುತ್ತೇನೆ. ನಿನ್ನ ಹೆಂಡತಿ ಈ ಯೋಧಕನ್ಯೆಯರಲ್ಲಿ ಒಬ್ಬಳಾಗಿರಬೇಕು. ನಾಳೆ ಸ್ನಾನಕ್ಕೆ ಅವರು ಇಲ್ಲಿಗೆ ಬರುವಾಗ, ಅವರಲ್ಲಿ ನಿನ್ನ ಹೆಂಡತಿ ಯಾರೆಂದು ಗುರುತಿಸಿದೆಯೆಂದರೆ ನಿನ್ನ ಕೆಲಸ ಸುಲಭವಾಗುತ್ತದೆ" ಎಂದಳು.

ಅವಳು ಹೇಳಿದ ಹಾಗೆ ಮರುದಿನ ಯೋಧಕನ್ಯೆಯರು ಸಮುದ್ರದಲ್ಲಿ ಸ್ನಾನ ಮಾಡಲು ಬಂದು ಕವಚ ಶಿರಸ್ತ್ರಾಣಗಳನ್ನೆಲ್ಲ ಕಳಚಿಟ್ಟರು. ಮಾರು ವೇಷದಲ್ಲಿದ್ದ ಹಸನ್ ಅವರೆಲ್ಲರನ್ನೂ ನೋಡಿದನು. ಅವರಲ್ಲಿ ಯಾರೂ ಅವನ ಹೆಂಡತಿಯಲ್ಲ!

ಎಲ್ಲರೂ ಸ್ನಾನಮಾಡಿಕೊಂಡಿರುವಾಗ ಹಸನ್ ಅವರಲ್ಲಿ ತನ್ನವಳು ಇಲ್ಲವೆಂದು ಹೇಳಿದ ಕೂಡಲೇ ಯೋಧವೃದ್ಧೆ ಗಾಬರಿಯಾಗಿ "ಅಯ್ಯಯ್ಯೋ! ಹಸನ್! ಇನ್ನು ಇಲ್ಲಿ ಉಳಿದವರು ಚಕ್ರವರ್ತಿಯ ಏಳು ಮಂದಿ ಕುಮಾರಿಯರು ಮಾತ್ರವೇ! ಅವರಲ್ಲಿ ಒಬ್ಬಳು ನಿನ್ನ ಹೆಂಡತಿಯಾಗಿರುವ ಪಕ್ಷದಲ್ಲಿ, ನೀನೂ, ನಾನೂ ಕೂಡಾ ಸತ್ತೆವೆಂದುಕೋ! ಅಪ್ಪಾ! ನೀನು ಹುಡುಕುವುದು ನಿನ್ನ ಹೆಂಡತಿಯನ್ನಲ್ಲ, ಮೃತ್ಯುವನ್ನು! ಈ ಪ್ರಯತ್ನ ಬಿಟ್ಟು ನಿರಾಶೆ ತಾಳು!" ಎಂದಳು.

"ಅಮ್ಮಾ! ಇಷ್ಟು ದೂರ ಬಂದು ಈಗ ಹಿಂದೆ ಹೋಗಲಾ? ನಿನ್ನ ಸಹಾಯವನ್ನು ತುಂಬಾ ನಂಬಿದೆನಲ್ಲಾ! ಈಗ ನಾನು ಅಪಜಯಪಟ್ಟರೆ ಅದು ನಿನ್ನ ಶಕ್ತಿ ಸಾಮರ್ಥ್ಯಗಳಿಗೂ ಅವಮಾನವಲ್ಲವೇ? ಈ ಏಳು ದ್ವೀಪಗಳೂ ನಿನ್ನ ರಕ್ಷಣೆಯಲ್ಲಿರುವಾಗ ನಿನಗೆ ಅಸಾಧ್ಯ ಅಂತ ಒಂದು ಇದೆಯೇ? ದಯಮಾಡಮ್ಮಾ!" ಎಂದನು ಹಸನ್.

"ಈ ದ್ವೀಪಗಳನ್ನು ಕಾಪಾಡುವ ಯೋಧಕನ್ಯೆಯರ ಮೇಲಷ್ಟೇ ನನಗಿರುವ ಅಧಿಕಾರ. ಅವರಲ್ಲಿ ನಿನಗೆ ಇಷ್ಟ ಬಂದವರನ್ನು ಕೇಳು, ಕೊಡುತ್ತೇನೆ. ಅವಳನ್ನು ನಿನ್ನ ನಗರಕ್ಕೆ ಕರೆದುಕೊಂಡು ಹೋಗಿ ಸುಖವಾಗಿರು. ಅದು ಸಾಧ್ಯವಿಲ್ಲದಿದ್ದರೆ ನಮಗೆ ಇಬ್ಬರಿಗೂ ವಿಪತ್ತು ತಪ್ಪದು ಕಂದಾ!" ಎಂದಳು ಯೋಧ ವೃದ್ಧೆ.

(ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೮೨ ಆಗಸ್ಟು ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.**



Devidas Kasbekar





A. L. Syed

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಜೂನ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

## ಏಪ್ರಿಲ್ ಸ್ಪರ್ಧೆಯ ಫಲಿತಾಂಶ:

**ಮೊದಲನೇ ಫೋಟೋ: ಅಬ್ಬೋ! ಗುಮ್ಮ ಇದ್ದಾನೋ ಅದ್ರೊಳಗೆ!**

**ಎರಡನೇ ಫೋಟೋ: ಗುಮ್ಮ ಇಲ್ಲಕ್ಯಾ, ಚಂದ ಚಂದದ ಅಮ್ಮಂದ್ರೂ!**

ಕಳುಹಿಸಿದವರು: ಪಿ. ಎಸ್. ರಾವ್, ಮಂಗಳೂರು-೩

ಬಹುಮಾನ ರೂ. ೨೫/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

The stories, articles and designs contained herein are exclusive property of the Publishers and copying or adopting them in any manner will be dealt with according to law.

ಉತ್ಸಾಹ ಇಮ್ಮಡಿಸಲು
ವಿಶೇಷ ಶಕ್ತಿದಾಯಕ

ಕ್ವಾಲಿಟಿ
ಗ್ಲೂಕೋಸ್
ಸಿಹಿ ಮತ್ತು
ಶಕ್ತಿದಾಯಕ ರುಚಿ

KWALITY glucos BISCUITS

CAS/KBPL/81126

ಕ್ವಾಲಿಟಿ ಗ್ಲೂಕೋಸ್ ಬಿಸ್ಕತ್ತುಗಳು, ಉತ್ಕೃಷ್ಟ ವೃತ್ತಿ ನೈಪುಣ್ಯತೆ ಹಾಗೂ ಶ್ರೇಷ್ಠವಾದ ಮಿಶ್ರಣಗಳಿಂದ ತಯಾರಿಸಲಾಗಿದೆ. ನಿಮ್ಮ ಪೌಷ್ಟಿಕತೆಗೆ ಉತ್ತಮ ದರ್ಜೆಯ ಗರಿಗರಿ ಬಿಸ್ಕತ್ತುಗಳು.

**ಕ್ವಾಲಿಟೀಸ್**
**ಗ್ಲೂಕೋಸ್ ಬಿಸ್ಕತ್ತುಗಳಲ್ಲಿ ಅಪರಂಜಿ**




ಕ್ವಾಲಿಟಿ
ಬಿಸ್ಕಟ್ಸ್ ಪ್ರೈ. ಲಿ.
ಬೆಂಗಳೂರು-560 039.